ಭಾಗ-1

# ಉಪಾಧಿಖಂಡನ ಮಂದಾರಮಂಜರೀ

ಏನೂ ಅರಿಯದ
ಆರಂಭದ ಕುತೂಹಲಿಗಳಿಗೆ ಸುಜ್ಞಾನದಾಯಕ !

ವಿದ್ವಾಂಸರಿಗೆ ವಿಸ್ಮಯದಾಯಕ !

ಪ್ರತಿಯೊಬ್ಬರಿಗೂ ಆನಂದದಾಯಕ



ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

# ಉಪಾಧಿಖಂಡನ
# ಮಂದಾರಮಂಜರೀ

ಏನೂ ಅರಿಯದ ಆರಂಭದ-
ಕುತೂಹಲಿಗಳಿಗೆ ಸುಜ್ಞಾನದಾಯಕ !

ವಿದ್ವಾಂಸರಿಗೆ ವಿಸ್ಮಯದಾಯಕ !

ಪ್ರತಿಯೊಬ್ಬರಿಗೂ ಆನಂದದಾಯಕ !

| | |
|---|---|
| * ಅನುವಾದ | * ನೆನೆಪಿಡಿ |
| * ಟೀಕೆಯ ಅರ್ಥ | * ಆಕರ್ಷಕಶಿರೋನಾಮಗಳು |
| * ವಿವರಣೆ | * ಸಾರಾಂಶ |
| * ವಿಶೇಷವಿಚಾರ | * ಪ್ರಶ್ನೋತ್ತರಗಳು |
| * ವಿದ್ಯಾರ್ಥಿಗಳೇ ಗಮನಿಸಿ | * ಪ್ರಶ್ನೆಗಳಿಗೆ ಉತ್ತರಿಸಿ |

ಹೀಗೆ ಅನೇಕ ಮಜಲುಗಳಲ್ಲಿ ಉಪಾಧಿಖಂಡನಗ್ರಂಥದ ಮೂಲಕ ನಿಮ್ಮ ವೇದಾಂತಪ್ರವೇಶಕ್ಕೆ ಸ್ವಾಗತ - ಸುಸ್ವಾಗತ

ಉಪಾಧಿಖಂಡನ ಕನ್ನಡಾನುವಾದ ಮನ್ಮಥನಾಮಸಂವತ್ಸರ ಫಾಲ್ಗುಣಬಹುಳಚತುರ್ಥೀ ದಿನಾಂಕ 27-3- 2016. ಶ್ರೀವ್ಯಾಸತೀರ್ಥ ಗುರುಸಾರ್ವಭೌಮರ ಆರಾಧನೆಯ ಶುಭಮುಹೂರ್ತದಲ್ಲಿ ನವವೃಂದಾವನದಲ್ಲಿ ಶ್ರೀವ್ಯಾಸತೀರ್ಥಗುರುಸಾರ್ವಭೌಮರಿಗೆ ಸಮರ್ಪಣೆ ಮಾಡಿ ಲೋಕಾರ್ಪಣೆ ಮಾಡಲಾಯಿತು

ಪ್ರಕಾಶನ : ಮೋಹನ್,
ಬಸವನಗುಡಿ, ಬೆಂಗಳೂರು, 9845049874

ಸಂಪಾದನೆ ಮತ್ತು ಅನುವಾದ : ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು 9141495120

ಪ್ರಥಮಮುದ್ರಣ : 2016

ಪುಟಗಳು - xii + 186

ಬೆಲೆ : 60 ರೂ,

ಪ್ರತಿಗಳು 1000



ಅಕ್ಷರಜೋಡಣೆ
ಸುಬ್ಬಣ್ಣ. ಕೆಂಪದಾಳಿಹಳ್ಳಿ; (080) 26761614

ಮುದ್ರಣ :
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

ಜಗದ್ಗುರು ಶ್ರೀಮನ್ಮಧ್ವಾಚಾರ್ಯವಿರಚಿತ

# ಉಪಾಧಿಖಂಡನ

ಶ್ರೀಮಜ್ಜಯತೀರ್ಥಭಿಕ್ಷುವಿರಚಿತ

## ಉಪಾಧಿಖಂಡನ ಟೀಕಾ

ಶ್ರೀವ್ಯಾಸತೀರ್ಥವಿರಚಿತ
ಮಂದಾರಮಂಜರೀ

ಶ್ರೀನಿವಾಸತೀರ್ಥವಿರಚಿತ
ಉಪಾಧಿಖಂಡನವ್ಯಾಖ್ಯಾವಿವೃತಿ

ಸಂಪಾದನೆ ಮತ್ತು ಅನುವಾದ
ವಿದ್ವಾನ್॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

ಪ್ರಕಾಶನ
ಮೋಹನ್
ಬಸವನಗುಡಿ ಬೆಂಗಳೂರು

ಉಪಾಧಿಖಂಡನ ಗ್ರಂಥವು ವೇದಾಂತಪ್ರವೇಶಕ್ಕೆ ಮೊದಲ ಗ್ರಂಥ. ಇದನ್ನು ಸುಲಭವಾಗಿ ಎಲ್ಲ ಹಂತದವರಿಗೂ ಅರ್ಥಮಾಡಿಸಲು ಅನೇಕ ಮಜಲುಗಳಲ್ಲಿ ಕನ್ನಡಾನುವಾದ ಮಾಡಲಾಗಿದೆ. ಆ ಮಜಲುಗಳ ಯಾದಿ ಹೀಗಿದೆ –

1. **ಉಪಾಧಿಖಂಡನ ಸಂಸ್ಕೃತಮೂಲ**
2. ಕನ್ನಡ ಮೂಲ
3. ಮೂಲದ ಪ್ರತಿಪದಾರ್ಥ.
4. ಮೂಲದ ಅನುವಾದ
5. **ಟೀಕಾಸಂಸ್ಕೃತಮೂಲ**
6. ಕನ್ನಡ ಮೂಲ
7. ಅನುವಾದ
8. ಪ್ರತಿಪದಾರ್ಥ
9. ವಿವರಣೆ
10. ವಿಶೇಷವಿಚಾರ
11. ನೆನೆಪಿಡಿ

ಈ ಕ್ರಮದಲ್ಲಿ ಪ್ರತಿಯೊಂದು ಮೂಲಗಳನ್ನೂ ಅನುವಾದ ಮಾಡಲಾಗಿದೆ.

* * * * *

# ವೇದಾಂತಪ್ರವೇಶಕ್ಕೆ ಸ್ವಾಗತ

''ಭಾರ ...........''

ಏನು ಭಾರ? ........ ಭಾರ ಎತ್ತುವ ನೊಗ ಹೆಗಲ ಮೇಲೆ ಇದೆಯೇ?

''ಇಲ್ಲ'' ..........

''ಬದುಕು ಭಾರ; ಜೀವನದ ಪ್ರತಿಯೊಂದು ಹೆಜ್ಜೆಗಳೂ .....ಭಾರ ......''

ಬದುಕಿನ ಭಾರ ಕಳೆದು ಹಗುರಾಗಲು ಜ್ಞಾನ ಬೇಕು.....

ಜ್ಞಾನ .... ತುಂಬಿದರೆ ತಲೆ ಭಾರ ಆಗುವುದಿಲ್ಲವೇ ... ?

ಹೌದು....; ಹೌದು ...; ಕೆಲವರಿಗೆ ಅದೂ ಕೂಡ ಭಾರವೇ. ಕೆಲವರಿಗಂತೂ ಜೀರ್ಣವಾಗದ ವಿಷ.

ಅದಕ್ಕೇನು ಉಪಾಯ ....?

ದೊಡ್ಡ ಹಸಿವು ಬೇಕು; ಅದಕ್ಕಾಗಿ ನಡೆಯಬೇಕು; ನಡೆಯದಿದ್ದರೆ ಬೆಳವಣಿಗೆಯೇ ಆಗದು;

ನಡೆಯಬೇಕಾದ ದಾರಿ ಯಾವುದಯ್ಯ ....?

''ಇದೋ ....................!!!! ಇಲ್ಲಿ!!''

ಎಂದು ತೋರಿಸುವ ತೋರು ಬೆರಳು ಈ ಪುಸ್ತಕ.

'ಇನ್ನು ಮುಂದೆ ನಿಮ್ಮ ತೋರುಬೆರಳಿನ ಬೆಳಕಿನಲ್ಲಿ ನಮ್ಮ ಹೆಜ್ಜೆ.'

'ಇನ್ನೊಂದು ಪ್ರಶ್ನೆ.....?'

'ಏನು ...?'

'ದಾರಿಯೆಂದರೆ ರಾಜಮಾರ್ಗವೇ..?

ಇಲ್ಲ. ಹೀಗೆ ಸಾಗಿದಾಗ ಮುಂದೊಂದು ದಿನ ರಾಜಮಾರ್ಗ ಸಿಗುತ್ತದೆ. ಮೊದಲು ಸಿಗುವ ಈ ದಾರಿ ಪರ್ವತ, ಹಳ್ಳ ಕೊಳ್ಳ, ಕಲ್ಲು, ಮುಳ್ಳುಮಯ.

'ಸಾಧ್ಯವಿಲ್ಲ....... ಮೊದಲೇ ಭಾರದ ದೇಹ; ಪುನಃ ಈ ಕಠಿನ ಮಾರ್ಗದಲ್ಲಿ ಅದನ್ನು ಹೊತ್ತೊಯ್ಯುವುದು ಹೇಗೆ.?'

ಚಿಂತೆ ಬೇಡ. ಕಠಿಣಮಾರ್ಗವು ಈಗ ಸರಳವಾಗಿದೆ. ಕಾಲದಿಂದ ಕಾಲಕ್ಕೆ ಈ ದಾರಿ ಸರಳವಾಗುತ್ತಲೇ ಇದೆ.

ಐನ್‌ಸ್ಟೈನ್ ಎಂಬ ವಿಜ್ಞಾನಿ ಜೀವನವಿಡೀ ಒಂದೇ ವಿಷಯಕ್ಕೆ ಜೀವನ ಸವೆದ. ಊಟ ನಿದ್ರೆಗಳನ್ನು ಬಿಟ್ಟ. ತನ್ನ ಜೀವನದ ತಪಸ್ಸಿನಲ್ಲಿ ಕಂಡದ್ದನ್ನು ಕೊನೆಗೊಂದು ದಿನ ಜಗತ್ತಿಗೆ ಹೇಳಿದ. ಆದರೆ ಅವನು ಹೇಳಿದ ಆಟಮ್ ಬಗ್ಗೆ ಇಂದು ಶಾಲೆಯ ಅಧ್ಯಾಪಕ ಹತ್ತು ನಿಮಿಷದಲ್ಲಿ ಸುಂದರವಾಗಿ ವಿವರಿಸುತ್ತಾನೆ. ಐನ್‌ಸ್ಟೈನ್ ತರಹ ಇವನು ಜೀವನ ಸವೆಸಬೇಕಾಗಿಲ್ಲ.

ಹೀಗೆ ಜ್ಞಾನ ಕಾಲದಿಂದ ಕಾಲಕ್ಕೆ ಸರಳವಾಗಬೇಕು. ಇಲ್ಲದಿದ್ದರೆ ಅದೂ ಕೂಡ ಮುಂದಿನವರಿಗೆ ಗೊಂಡಾರಣ್ಯ. ನೀರು ಹರಿದಷ್ಟು ಸ್ವಚ್ಛ, ಶುದ್ಧ. ಹರಿಯದೇ ಇದ್ದರೆ ಹಾಳು. ಸುಮ್ಮನೇ ಹರಿಯಲು ಬಿಟ್ಟರೆ ಸಮುದ್ರ ಸೇರಬಹುದು... ನಮಗೇನು ಉಪಯೋಗ?

ಆದಕ್ಕಾಗಿ ಅಣೆಕಟ್ಟು ಬೇಕು. ಆಗ ಅದು ಹಿತಮಿತವಾಗಿ ಪೂರ್ಣ ನಮಗೆ ಉಪಯೋಗವಾಗುವುದು. ವೇದಾಂತವೆಂಬ ಹರಿಯುವ ತಿಳಿನೀರಿಗೆ ಈ ಪುಸ್ತಕ ಒಂದು ಸಣ್ಣ ಅಣೆಕಟ್ಟು.

'ಸರಿ ಸರಿ ........ ಈ ದಾರಿ ಎಲ್ಲಿ ಹೋಗುತ್ತದೆ.......?'

ವೈಕುಂಠಕ್ಕೆ..

'ಈ ದಾರಿಯ ಹೆಸರು...?'

ವೇದಾಂತಶಾಸ್ತ್ರ...

'ದಾರಿಯಲ್ಲಿ ಸಿಗುವ ಪ್ರೇಕ್ಷಣೀಯಸ್ಥಳಗಳು .......?'

ಸರ್ವಮೂಲಗ್ರಂಥಗಳು, ಮಹಾಭಾರತ, ರಾಮಾಯಣ, ಪಂಚರಾತ್ರ, ನಾಕು ವೇದ ಹಾಗೂ ಉಪನಿಷತ್ತುಗಳು. ಮೊದಲು ನೋಡಬೇಕಾದದ್ದು ಯಾವುದು...?

## ಉಪಾಧಿಖಂಡನ.

'ಇದು ಮಾತ್ರವಾ ...?'
ಹೌದು; ಜೊತೆಯಲ್ಲಿ ಪ್ರಮಾಣಲಕ್ಷಣ ತತ್ವಸಂಖ್ಯಾನಗಳೂ ಕೂಡ ಪ್ರೇಕ್ಷಣೀಯ.

'ಈ ದಾರಿ ಬಲು ಅದ್ಭುತ. ಯಾರು ನಿರ್ಮಿಸಿದರು....?'
ಜಗದ್ಗುರು ಶ್ರೀಮನ್ಮಧ್ವಾಚಾರ್ಯರು.

'ಈ ದಾರಿಯಲ್ಲಿ ಸಾಗಿದ ಕೂಡಲೇ ವೈಕುಂಠ ಕಾಣಬಹುದಾ?'
ಸಾಧ್ಯವಿಲ್ಲ; ಅಂತಿಮವಾಗಿ ಧ್ಯಾನತತ್ಪರನಾಗಿ ತಪಸ್ಸು ಮಾಡಲೇ ಬೇಕು.

'ಈ ದಾರಿಯಲ್ಲಿ ಯಾರಿಗೆ ಪ್ರವೇಶ...?'
ಇಂದ್ರಿಯನಿಗ್ರಹ, ಹರಿಭಕ್ತಿಗಳ ಪರೀಕ್ಷೆಯಲ್ಲಿ ತೇರ್ಗಡೆಯಾ-

ಗಿರಬೇಕು. ಕಣ್ಣುಗಳಿಗೆ ಪ್ರೇಕ್ಷಣೀಯಸ್ಥಳಗಳನ್ನು ನೋಡಲೇ ಬೇಕೆಂಬ ದೊಡ್ಡ ಹಸಿವಿರಬೇಕು. ಷೋಡಶಸಂಸ್ಕಾರವುಳ್ಳ ಸದ್ಬ್ರಾಹ್ಮಣನೇ ಆಗಿರಬೇಕು.

ದೇಹ ತೊಳೆದು ಹೊಲೆಯದ ಬಟ್ಟೆಯನ್ನು ಧರಿಸಿ ಒಳಬರಬೇಕು.

## ಈ ಪುಸ್ತಕದ ಬಗ್ಗೆ

ಒಟ್ಟಾರೆ ಈ ಪುಸ್ತಕ ವೇದಾಂತಕ್ಕೆ ಒಂದು ಪ್ರವೇಶಿಕೆ. ವಿದ್ಯಾರ್ಥಿಗಳಿಗೆ ವೇದಾಂತದ ಆಳ ಅಗಲಗಳನ್ನು ಸುಲಭವಾಗಿ ಪರಿಚಯಿಸುವ ಕೈದೀವಿಗೆ. ಎಂಥಾ ಕಠಿಣ ವಿಷಯಗಳು ಇಲ್ಲಿ ಬಹು ಸರಳ. ಸರಳ-ವಿಷಯಗಳು ಸರಳಾತಿಸರಳ. ವೇದಾಂತಾಧ್ಯಯನ ಪ್ರಾರಂಭ ಮಾಡುವ ಪ್ರತಿಯೊಬ್ಬರಿಗೂ ರಸದೌತಣ.

## ಯಾರಿಗೆ ಈ ಪುಸ್ತಕ?

* ಸಂಸ್ಕೃತವೇ ಬಾರದ ವೇದಾಂತ ಕುತೂಹಲಿಗಳಿಗೆ.
* ಸಂಸ್ಕೃತ ಕಲಿತಿರುವ ಜನಸಾಮಾನ್ಯರಿಗೆ.
* ಸಂಸ್ಕೃತಕಲಿತು ವೇದಾಂತ ಪ್ರವೇಶಿಸುವವರಿಗೆ.
* ವೇದಾಂತ ಪ್ರವೇಶಿಸಿ ಸಂಸ್ಕೃತ ಗ್ರಂಥದಿಂದ ನೇರವಾಗಿ ಅರ್ಥ ಮಾಡಿಕೊಳ್ಳದವರಿಗೆ.
* ಸಂಸ್ಕೃತಗ್ರಂಥದಿಂದ ವಿಷಯವು ಪೂರ್ಣ ಮನದಟ್ಟಾಗದವರಿಗೆ.
* ವಿಷಯ ಅರ್ಥವಾದರೂ ವೇದಾಂತದ ಹೃದಯ ತಿಳಿಯದವರಿಗೆ.
* ಹೃದಯ ಅರ್ಥವಾದರೂ ಮತ್ತೊಬ್ಬರಿಗೆ ಸ್ಪಷ್ಟವಾಗಿ ವಿಷಯ ವಿವರಿಸಲು ಬಾರದವರಿಗೆ.

*. ಎಲ್ಲವೂ ಅರ್ಥವಾದರೂ ಟೀಕೆಯ ಪ್ರತಿಯೊಂದು ಪದಗಳ ಪರಿಪೂರ್ಣ ಅರ್ಥ ತಿಳಿಯದವರಿಗೆ.

* ಮಂದಾರಮಂಜರೀ ಎಂಬ ಕಠಿಣ ಟಿಪ್ಪಣಿಯನ್ನು ಅರ್ಥ ಮಾಡಿಕೊಳ್ಳದ ವ್ಯುತ್ಪತ್ತಿ ಇರುವವರಿಗೆ.

* ಶ್ರೀನಿವಾಸತೀರ್ಥೀಯ ಟಿಪ್ಪಣಿಯನ್ನು ಆಮೂಲಾಗ್ರ ಓದುವ ಕುತೂಹಲವುಳ್ಳವರಿಗೆ.

* ಪ್ರಶ್ನೋತ್ತರಗಳ ಮೂಲಕ ವಿಷಯವನ್ನು ಅರ್ಥಮಾಡಿಕೊಳ್ಳಲು ಆಸಕ್ತಿ ಇರುವವರಿಗೆ.

* ವಿದ್ವಾಂಸರಿಗೆ.

* ಉಪಾಧಿಖಂಡನ ಪಾಠ ಹೇಳುವ ಅಧ್ಯಾಪಕರಿಗೆ.

ಈ ಮೇಲಿನ ಇಷ್ಟು ವರ್ಗಗಳಲ್ಲಿ ಸೇರಿದ ಯಾರೊಬ್ಬರೂ ಈ ಪುಸ್ತಕದ ಪೂರ್ಣ ಉಪಯೋಗವನ್ನು ಪಡೆದುಕೊಳ್ಳಬಹುದು.

* * * * *

## ಪುಸ್ತಕಪ್ರಕಾಶನವನ್ನು ಮಾಡುತ್ತಿರುವ ಮೋಹನ್ ಇವರಿಗೆ ಕೃತಜ್ಞತೆಗಳು

ನವವೃಂದಾವನದಲ್ಲಿ ನೆಲೆಸಿರುವ ಒಂಭತ್ತು ಯತಿಗಳ ಸೇವೆಯಲ್ಲಿ ಆಸಕ್ತರಾದ ವಿಶೇಷವಾಗಿ ಶ್ರೀವ್ಯಾಸರಾಜರ ಭಕ್ತರಾಗಿರುವ ಮೋಹನ್ ಇವರಿಗೆ ವಿಶೇಷ ಕೃತಜ್ಞತೆಗಳು.

ನವವೃಂದಾವನ ಕ್ಷೇತ್ರದಲ್ಲಿ 35 ವರ್ಷಗಳ ಕಾಲ ಅಹೋರಾತ್ರಿ ಸೇವೆಗೈದ ದಿ॥ ಶ್ರೀವಿಷ್ಣುತೀರ್ಥಾಚಾರ್ಯರ ವಿಶೇಷ ಆಶೀರ್ವಾದಕ್ಕೆ

ಪಾತ್ರರಾದ ಮೋಹನ್.ಕೆ. ಇವರು ನವ ಯತಿಗಳ ಪ್ರೇರಣೆಯಂತೆ ಈ ಜ್ಞಾನಸೇವೆಯನ್ನು ಮಾಡಲು ಮುನ್ನುಗ್ಗಿದ್ದಾರೆ. ಇದೇ ಬರುವ ಮನ್ಮಥ ನಾಮ ಸಂವತ್ಸರದ ಫಾಲ್ಗುಣ ಬಹುಳ ಚತುರ್ಥಿಯಂದು ಶ್ರೀವ್ಯಾಸರಾಜಗುರುಸಾರ್ವಭೌಮರ ಆರಾಧನೆಯ ಶುಭಸಂದರ್ಭ-ದಲ್ಲಿ ಶ್ರೀವ್ಯಾಸರಾಜರು ರಚಿಸಿರುವ ಮಂದಾರಮಂಜರೀ ಟಿಪ್ಪಣಿ-ಯನ್ನು ಗುರುಗಳ ಅಂತರ್ಯಾಮಿಗೆ ಸಮರ್ಪಣೆ ಮಾಡುವ ಹೆಬ್ಬಯಕೆ ಇವರದ್ದಾಗಿದೆ. ಇದರಿಂದ ಅನೇಕ ಸಜ್ಜನರಿಗೆ ಮಹದುಪ-ಕಾರವಾಗುವುದರಲ್ಲಿ ಸಂಶಯವೇ ಇಲ್ಲ.

ಹೀಗೆ ಜ್ಞಾನಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮೋಹನ್ ಅವರು ಹಾಗೂ ಅವರ ಸಂತತಿಯವರು ಈ ಜ್ಞಾನ-ಕಾರ್ಯದಿಂದ ಬರುವ ಸಂಪೂರ್ಣ ಫಲವನ್ನು ಹೊಂದಿ, ಶ್ರೀಹರಿ-ವಾಯುಗುರುಗಳ ವಿಶೇಷ ಅನುಗ್ರಹಕ್ಕೆ ಪಾತ್ರರಾಗಲಿ. ಹಾಗೂ ಶ್ರೀವ್ಯಾಸತೀರ್ಥರ ವಿಶೇಷ ಆಶೀರ್ವಾದ ಅವರಿಗೆ ಇರಲಿ ಎಂದು ಪ್ರಾರ್ಥಿಸುತ್ತೇನೆ. ಈ ಉಪಾಧಿಖಂಡನದ ಮುಂದಿನ ಭಾಗದ ಮುದ್ರಣಕಾರ್ಯವನ್ನೂ ಕೂಡ ದೇವರು ಇವರ ಮೂಲಕ ಮಾಡಿಸಲಿ ಎಂದು ಅಪೇಕ್ಷಿಸುತ್ತೇನೆ.

ಲೇಖಕ

ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

# ಏನಿದು ಉಪಾಧಿಖಂಡನ...?

ಮುಖ್ಯಪ್ರಾಣದೇವರ ಅವತಾರಭೂತರಾದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರು ದಶಪ್ರಕರಣಗಳನ್ನು ರಚನೆ ಮಾಡಿರುವರು. ಇವುಗಳಲ್ಲಿ ಮಾಯಾವಾದಖಂಡನ, ಉಪಾಧಿಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ ಎಂಬ ಮೂರು ಕೃತಿಗಳು ಖಂಡನತ್ರಯವೆಂದು ಪ್ರಸಿದ್ಧವಾಗಿವೆ.

ಈ ಖಂಡನತ್ರಯಗ್ರಂಥಗಳು ಅದ್ವೈತಮತದ ಮುಖ್ಯಪ್ರಮೇಯವೆನಿಸಿದ ಜೀವಬ್ರಹ್ಮೈಕ್ಯದ ನಿರಾಕರಣೆಗಾಗಿ ಹೊರಟಿರುತ್ತವೆ. ಮೋಕ್ಷಸಾಧಕರಾದವರು ಜೀವಬ್ರಹ್ಮೈಕ್ಯವನ್ನು ಸರ್ವಥಾ ತಿಳಿಯಬಾರದು ಎಂಬ ಉದ್ದೇಶದಿಂದ ಈ ಖಂಡನತ್ರಯವನ್ನು ಶ್ರೀಮದಾಚಾರ್ಯರು ರಚಿಸಿರುವರು. ಪ್ರತಿಯೊಬ್ಬ ವಿದ್ಯಾರ್ಥಿಯು ವೇದಾಂತಾಧ್ಯಯನವನ್ನು ಪ್ರವೇಶಿಸಲು ಈ ಮೂರು ಗ್ರಂಥಗಳನ್ನೇ ಮೊದಲು ಅಭ್ಯಾಸ ಮಾಡಬೇಕು.

ಮಾಯಾವಾದಖಂಡನದ ಮುಂದುವರೆದ ಭಾಗವೇ ಉಪಾಧಿಖಂಡನ ಗ್ರಂಥ. ''ಜಗತ್ತಿನಲ್ಲಿ ಕಾಣಿಸುತ್ತಿರುವ ಭೇದವು ಮಿಥ್ಯಾಭೂತವಾಗಿದೆ. ಏಕೆಂದರೆ ಬ್ರಹ್ಮಾತಿರಿಕ್ತವಾದದ್ದೆಲ್ಲವೂ ಅಜ್ಞಾನದ ಕಾರ್ಯವಾಗಿದೆ. ಭೇದದ ದರ್ಶನಕ್ಕೆ ಅಜ್ಞಾನವೇ ಉಪಾಧಿ.'' ಎನ್ನುತ್ತಾರೆ ಅದ್ವೈತಿಗಳು. ಅಜ್ಞಾನವೆಂಬ ಉಪಾಧಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಹಾಗೂ ಈ ಸಮಸ್ತಜಗತ್ತು ಅಜ್ಞಾನಕಾರ್ಯವಾಗಿರುವುದಿಲ್ಲ ಎನ್ನುವುದರ ಸಮರ್ಥನೆಗಾಗಿ ಮಾಯಾವಾದ ಖಂಡನ ಗ್ರಂಥ ಹಾಗೂ ಉಪಾಧಿಖಂಡನಗ್ರಂಥಗಳು ಹೊರಟಿವೆ. ಹೀಗೆ ಅದ್ವೈತಿಗಳು ಹೇಳುವ ಅಜ್ಞಾನವೆಂಬ ಉಪಾಧಿಯನ್ನು ಖಂಡನೆ ಮಾಡುವ ಗ್ರಂಥವೇ **ಉಪಾಧಿಖಂಡನ** ಎನಿಸಿದೆ.

* * * * * * *

ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್
ಶ್ರೀಮುಖ್ಯಪ್ರಾಣೋ ವಿಜಯತೇತರಾಮ್
ಶ್ರೀಗುರುಭ್ಯೋ ನಮಃ

नारायणोऽगण्यगुणनित्यैकनिलयाकृतिः ।
अशेषदोषरहितः प्रीयतां कमलालयः ।।

ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।
ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ॥

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ

ವಿರಚಿತವಾದ

# ಉಪಾಧಿಖಂಡನ

**नारायणोऽगण्यगुणनित्यैकनिलयाकृतिः ।**
**अशेषदोषरहितः प्रीयतां कमलालयः ॥१॥**

ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।
ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ॥1॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

# ಉಪಾಧಿಖಂಡನಟೀಕೆ

### ರಮಾಕಾಂತನಿಗೆ ಭಕ್ತಿಯ ನಮನ

रमाया रमणं नत्वा गुणमाणिक्यमण्डनम् ।
तत्वप्रकाशिकाव्याख्यां करिष्यामो यथामति ॥

ರಮಾಯಾ ರಮಣಂ ನತ್ವಾ ಗುಣಮಾಣಿಕ್ಯಮಂಡನಮ್ ।
ತತ್ವಪ್ರಕಾಶಿಕಾವ್ಯಾಖ್ಯಾಂ ಕರಿಷ್ಯಾಮೋ ಯಥಾಮತಿ ॥

ಮಹಾಲಕ್ಷ್ಮಿಗೆ ಸುಖವನ್ನು ನೀಡುವ ತನ್ನಲ್ಲಿರುವ ಗುಣಗಳೆಂಬ ಮಾಣಿಕ್ಯಗಳಿಗೆ ಅಲಂಕಾರಭೂತನಾದ ಶ್ರೀಹರಿಯನ್ನು ನಮಸ್ಕಾರ ಮಾಡಿ, ಶ್ರೀಮದಾಚಾರ್ಯರ 'ತತ್ವಪ್ರಕಾಶಿಕಾ' ಎಂಬ ಗ್ರಂಥಕ್ಕೆ ಬುದ್ಧಿಗೆ ನಿಲುಕಿದಷ್ಟು ವ್ಯಾಖ್ಯಾನವನ್ನು ರಚಿಸುತ್ತಿದ್ದೇನೆ.

**ಶ್ರೀಬ್ರಹ್ಮಣ್ಯತೀರ್ಥಪೂಜ್ಯಚರಣರ ಶಿಷ್ಯರಾದ ಶ್ರೀವ್ಯಾಸತೀರ್ಥರಿಂದ ವಿರಚಿತವಾದ ಉಪಾಧಿಖಂಡನಟೀಕೆಯ ಟಿಪ್ಪಣಿ**

# ಮಂದಾರಮಂಜರೀ

## ಹಯಗ್ರೀವದೇವರಿಗೆ ನಮಸ್ಕಾರ

लक्ष्मीकरतलाम्भोजलालनीयपदाम्बुजम् ।
प्रणमामि हयग्रीवं देवताचक्रवर्तिनम् ।। १ ।।

ಲಕ್ಷ್ಮೀಕರತಲಾಂಭೋಜ-ಲಾಲನೀಯ-ಪದಾಂಬುಜಮ್ ।
ಪ್ರಣಮಾಮಿ ಹಯಗ್ರೀವಂ ದೇವತಾಚಕ್ರವರ್ತಿನಮ್ ॥೧॥

ಲಕುಮಿಯ ಅಂಗೈಗಳೆಂಬ ಕಮಲಪುಷ್ಪಗಳಿಂದ ಮುದ್ದಿಸಲ್ಪಟ್ಟ ಕಾಲ್ಕಮಲಗಳುಳ್ಳ ದೇವತಾಸಾರ್ವಭೌಮನಾದ ಹಯಗ್ರೀವನನ್ನು ಭಕ್ತ್ಯತಿಶಯದಿಂದ ಸಾಷ್ಟಾಂಗ ನಮಿಸುವೆ.

ಅರ್ಥ- ಲಕ್ಷ್ಮೀಕರತಲಾಂಭೋಜಲಾಲನೀಯಪದಾಂಬುಜಮ್, ಲಕ್ಷ್ಮೀಕರತಲ = ಲಕ್ಷ್ಮೀದೇವಿಯ ಅಂಗೈಗಳೆಂಬ ಅಂಭೋಜ ಕಮಲಗಳಿಂದ, ಲಾಲನೀಯ = ಮುದ್ದಿಸಲ್ಪಟ್ಟ, ಪದಾಂಬುಜಂ = ಪಾದಕಮಲಗಳುಳ್ಳ, ದೇವತಾಚಕ್ರವರ್ತಿನಂ = ದೇವತಾಸಾರ್ವಭೌಮನಾದ, ಹಯಗ್ರೀವಂ = ಹಯಗ್ರೀವನನ್ನು, ಪ್ರಣಮಾಮಿ = ಭಕ್ತಿಯಿಂದ ನಮಸ್ಕಾರ ಮಾಡುವೆ.

## ಶ್ರೀಮದಾಚಾರ್ಯರಿಗೆ ನಮಸ್ಕಾರ

श्रीमदानन्दतीर्थार्यचरणाम्बुरुहद्वयम् ।
शिवेन्द्रादिशिरोभूषामादरादभिवादये ।।२।।

ಶ್ರೀಮದಾನಂದತೀರ್ಥಾರ್ಯಚರಣಾಂಬುರುಹದ್ವಯಮ್ ।
ಶಿವೇಂದ್ರಾದಿಶಿರೋಭೂಷಾಮ್ ಆದರಾತ್ ಅಭಿವಾದಯೇ ॥೨॥

ರುದ್ರ, ಇಂದ್ರ, ಚಂದ್ರ ಮೊದಲಾದ ದೇವತೆಗಳ ತಲೆಗೆ ಅಲಂಕಾರವಾದ ಶ್ರೀಮದಾನಂದತೀರ್ಥರ ಎರಡು ಪಾದಕಮಲಗಳನ್ನು ಆದರದಿಂದ ನಮಸ್ಕರಿಸುವೆ.

ಅರ್ಥ – ಶಿವೇಂದ್ರಾದಿಶಿರೋಭೂಷಾಮ್ = ರುದ್ರ, ಇಂದ್ರ, ಚಂದ್ರ ಮೊದಲಾದ ದೇವತೆಗಳ ತಲೆಗೆ ಅಲಂಕಾರವಾದ, ಶ್ರೀಮದಾನಂದತೀರ್ಥಾರ್ಯಚರಣಾಂಬುರುಹದ್ವಯಮ್ – ಶ್ರೀಮದಾನಂದತೀರ್ಥಾರ್ಯ ಪೂಜ್ಯರಾದ ಶ್ರೀಮದಾನಂದತೀರ್ಥರ, ಚರಣ = ಪಾದಗಳೆಂಬ, ಅಂಬುರುಹದ್ವಯಂ = ಎರಡು ಕಮಲಗಳನ್ನು, ಆದರಾತ್ = ಆದರದಿಂದ ಅಭಿವಾದಯೇ = ನಮಸ್ಕಾರ ಮಾಡುವೆ.

### ಶ್ರೀಜಯತೀರ್ಥಮುನಿಗಳಿಗೆ ಹಾಗೂ ನಮ್ಮ ಗುರುಗಳಿಗೆ ಭಕ್ತಿಯ ನಮಸ್ಕಾರ

जयतीर्थमुनिं नत्वा भक्त्याऽस्माकं गुरूनपि ।
तत्वप्रकाशिकाव्याख्यां यथामति विवृण्महे ।। ३ ।।

ಜಯತೀರ್ಥಮುನಿಂ ನತ್ವಾ ಭಕ್ತ್ಯಾಽಸ್ಮಾಕಂ ಗುರೂನಪಿ ।
ತತ್ವಪ್ರಕಾಶಿಕಾವ್ಯಾಖ್ಯಾಂ ಯಥಾಮತಿ ವಿವೃಣ್ಮಹೇ ॥೩॥

ಭಕ್ತಿಯಿಂದ ಶ್ರೀಜಯತೀರ್ಥಮುನಿಗಳಿಗೆ ನಮಸ್ಕಾರ ಮಾಡಿ, ನಮ್ಮ ಗುರುಗಳಾದ ಶ್ರೀಶ್ರೀಪಾದರಾಜರಿಗೆ ಹಾಗೂ ಶ್ರೀಬ್ರಹ್ಮಣ್ಯತೀರ್ಥರಿಗೆ ಭಕ್ತಿಯಿಂದ ನಮಸ್ಕಾರ ಮಾಡಿ, ಶ್ರೀಮದಾಚಾರ್ಯರ ತತ್ವಪ್ರಕಾಶಿಕಾಗ್ರಂಥಕ್ಕೆ ಶ್ರೀಮಟ್ಟೀಕಾಕೃತ್ಪಾದರು ಬರೆದಿರುವ ವ್ಯಾಖ್ಯಾನವನ್ನು ಬುದ್ಧಿಗೆ ತಿಳಿದಷ್ಟು ವಿವರಿಸುತ್ತೇನೆ.

ಅರ್ಥ – ಜಯತೀರ್ಥಮುನಿಂ = ಜಯತೀರ್ಥಮುನಿಗಳನ್ನು, ಭಕ್ತ್ಯಾ = ಭಕ್ತಿಯಿಂದ, ನತ್ವಾ = ನಮಸ್ಕಾರ ಮಾಡಿ, ಅಸ್ಮಾಕಂ = ನಮ್ಮ, ಗುರೂನಪಿ = ಗುರುಗಳನ್ನೂ ಕೂಡ, ನತ್ವಾ = ನಮಸ್ಕಾರ ಮಾಡಿ, ಯಥಾಮತಿ = ಬುದ್ಧಿಗೆ ನಿಲುಕಿದಷ್ಟು,

ತತ್ವಪ್ರಕಾಶಿಕಾವ್ಯಾಖ್ಯಾಂ = ತತ್ವಪ್ರಕಾಶಿಕಾ ಎಂಬ ಗ್ರಂಥದ ವ್ಯಾಖ್ಯಾನಕ್ಕೆ, ವಿವೃಣ್ಮಹೇ = ವ್ಯಾಖ್ಯಾನ ಮಾಡುತ್ತೇನೆ.

## ಮಂಗಳಾಚರಣೆ ಹಾಗೂ ಗ್ರಂಥಪ್ರತಿಜ್ಞೆ

ಮಂದಾರಮಂಜರೀ–

प्रारिप्सितग्रन्थाविघ्नपरिसमाप्त्यादिप्रयोजनकमविगीतशिष्टाचारानुमितश्रुतिप्रमाणकं परदेवताप्रणामलक्षणं मङ्गळमाचरन् ग्रन्थकर्ता जयतीर्थाचार्यश्चिकीर्षितं निर्दिशति – **रमाया इति ।।**

**ಪ್ರಾರಿಪ್ಸಿತಗ್ರಂಥಾವಿಘ್ನಪರಿಸಮಾಪ್ತ್ಯಾದಿಪ್ರಯೋಜನಕಮ್ ಅವಿಗೀತಶಿಷ್ಟಾಚಾರಾನುಮಿತಶ್ರುತಿಪ್ರಮಾಣಕಂ ಪರದೇವತಾಪ್ರಣಾಮಲಕ್ಷಣಂ ಮಂಗಳಮಾಚರನ್ ಗ್ರಂಥಕರ್ತಾ ಜಯತೀರ್ಥಾಚಾರ್ಯಃ ಚಿಕೀರ್ಷಿತಂ ನಿರ್ದಿಶತಿ – ರಮಾಯಾ ಇತಿ ।।**

ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರಕಾಶಿಕಾ ಎಂಬ ಗ್ರಂಥಕ್ಕೆ ವ್ಯಾಖ್ಯಾನ ಮಾಡಲು ಬಯಸಿದ್ದಾರೆ. ಪ್ರಾರಂಭದಲ್ಲಿ 'ಗ್ರಂಥವು ವಿಘ್ನವಿಲ್ಲದೇ ಪರಿಸಮಾಪ್ತಿಯಾಗಬೇಕು', 'ಸಮಸ್ತ ಶ್ರೋತೃವೃಂದಕ್ಕೆ ತಲುಪಬೇಕು' - ಇವೇ ಮೊದಲಾದ ಪ್ರಯೋಜನಕ್ಕಾಗಿ ಭಗವಂತನನ್ನು ನಮಸ್ಕರಿಸುವ ಮೂಲಕ ಮಂಗಲಾಚರಣೆಯನ್ನು ಮಾಡುತ್ತಿದ್ದಾರೆ. ಮಂಗಲಾಚರಣೆಯನ್ನು ಶುಕಾಚಾರ್ಯರು, ವಾಮದೇವರೇ ಮೊದಲಾದ ಸಕಲಶಿಷ್ಟರು ಮಾಡಿಕೊಂಡು ಬಂದಿದ್ದಾರೆ. ಇಂತಹ ಶಿಷ್ಟರ ಆಚರಣೆಯಿಂದ ಮಂಗಳವನ್ನು ಮಾಡಲೇಬೇಕೆಂಬ ಶ್ರುತಿಯು ಇರುತ್ತದೆಂದು ಊಹಿಸಬೇಕು. 'ಸಮಾಪ್ತಿಕಾಮೋ ಮಂಗಳಮ್ ಆಚರೇತ' ಎಂಬ ಶ್ರುತಿಯು ವೇದದಲ್ಲಿ ಇಲ್ಲದಿದ್ದರೂ ಅವಿಗೀತಶಿಷ್ಟಾಚಾರದಿಂದ ಸಿದ್ಧವಾಗುತ್ತದೆ. ಹೀಗೆ ಮಂಗಲಾಚರಣೆಯ ವಿಷಯದಲ್ಲಿ ಶ್ರುತಿ ಇರುವುದರಿಂದ ಶ್ರೀಮಟ್ಟೀಕಾಕೃತ್ಪಾದರು ಸರ್ವೋ-

ತ್ತಮನಾದ ನಾರಾಯಣನನ್ನು ನಮಿಸುವುದರ ಮೂಲಕ ಗ್ರಂಥದ ಪ್ರಾರಂಭ-ದಲ್ಲಿ ಮಂಗಲಾಚರಣೆಯನ್ನು ಆಚರಿಸುತ್ತಿದ್ದಾರೆ. ಇದರ ಜೊತೆಗೆ ತಾವು ಏನನ್ನು ಮಾಡಲು ಬಯಸಿದ್ದಾರೋ ಅದನ್ನು ಮಂಗಳಶ್ಲೋಕದಲ್ಲಿಯೇ ಉಲ್ಲೇಖಿಸುತ್ತಿದ್ದಾರೆ 'ರಮಾಯಾಃ' ಇತ್ಯಾದಿಯಾಗಿ.

**ವಿಶೇಷವಿಚಾರ** – ಮಂಗಳಾಚರಣೆ ಎಂದರೆ 'ಸರ್ವೋತ್ತಮನಾದ ಭಗ-ವಂತನನ್ನು ನಮಿಸುವುದು' ಎಂದರ್ಥ. ಇದು ಮೂರು ವಿಧ (೧) ಕಾಯಿಕ, (೨) ವಾಚನಿಕ, (೩) ಮಾನಸಿಕ ಎಂದು. ದೇವರೆದುರು ಸಾಷ್ಟಾಂಗ ನಮಿಸು-ವುದನ್ನು ಕಾಯಿಕ ಮಂಗಳಾಚರಣೆ ಎನ್ನುತ್ತಾರೆ. ಸ್ತೋತ್ರದ ಮೂಲಕ ಪ್ರಶಂಸೆ ಮಾಡುವುದನ್ನು ವಾಚನಿಕಮಂಗಳಾಚರಣೆ ಎನ್ನುತ್ತಾರೆ. ಮನಸ್ಸಿನಲ್ಲಿ ಭಗವಂತ-ನನ್ನು ಪ್ರಾರ್ಥನೆ ಮಾಡಿ ನಮಿಸುವುದನ್ನು ಮಾನಸಿಕ ಮಂಗಳಾಚರಣೆ ಎನ್ನು-ತ್ತಾರೆ. ಪ್ರಕೃತ ಉಪಾಧಿಖಂಡನ ಎಂಬ ಗ್ರಂಥವನ್ನು ಬರೆಯಲು ಪ್ರವೃತ್ತರಾದ ಶ್ರೀಮದಾಚಾರ್ಯರು ಈ ಮೂರು ಬಗೆಯ ಮಂಗಳಾಚರಣೆಯನ್ನು ನಿರಂತರ ಮಾಡುತ್ತಲೇ ಇರುತ್ತಾರೆ. ಅದನ್ನು ಶಿಷ್ಯರ ಶಿಕ್ಷಣೆಗೋಸ್ಕರ ಗ್ರಂಥದ ಪ್ರಾರಂಭದಲ್ಲಿ ಉಲ್ಲೇಖ ಮಾಡಿದ್ದಾರೆ.

**ವಿದ್ಯಾರ್ಥಿಗಳೇ ಗಮನಿಸಿ**

ಗ್ರಂಥದ ಪ್ರಾರಂಭದಲ್ಲಿರುವ ಶ್ಲೋಕವನ್ನು ಮಂಗಳಾಚರಣೆ ಎಂದು ಹೇಳಬಾರದು. ಮಂಗಳಾಚರಣೆಯ ಉಪನಿಬಂಧನ ಎಂದು ಹೇಳಬೇಕು. ಅಥವಾ ಮಂಗಳಾಚರಣೆಯ ಉಲ್ಲೇಖ ಎಂದು ಹೇಳಬೇಕು.

## ರಮಾಯಾಃ ರಮಣಂ ಎಂಬ ವಿಶೇಷಣದ ಬಗ್ಗೆ

ಮಂದಾರಮಂಜರೀ–

**रमणमिति** 'कृत्यल्युटो बहुलम्' इति कर्त्रर्थे ल्युटः स्मरणात् कर्तरि ल्युट् ।

‘ರಮಣಮ್’ ಇತಿ ‘ಕೃತ್ಯಲ್ಯುಟೋ ಬಹುಲಮ್’ ಇತಿ ಕರ್ತ್ರರ್ಥೇ ಲ್ಯುಟಃ ಸ್ಮರಣಾತ್ ಕರ್ತರಿ ಲ್ಯುಟ್ ।

‘ರಮಾಯಾಃ ರಮಣಂ’ ಎಂಬುದಕ್ಕೆ ಲಕ್ಷ್ಮೀದೇವಿಯ ರತಿಗೆ ಕರ್ತನಾದ’ ಎಂದರ್ಥ. ರಮಣಶಬ್ದದಲ್ಲಿರುವ ಲ್ಯುಟ್‌ಪ್ರತ್ಯಯಕ್ಕೆ ಕರ್ತೃತ್ವವನ್ನು ವಿವಕ್ಷಿಸಿದಾಗ ಮಾತ್ರ ಈ ಅರ್ಥವು ದೊರೆಯುತ್ತದೆ. ಆದರೆ ಲ್ಯುಟ್ ಪ್ರತ್ಯಯವು ಕರಣಾರ್ಥದಲ್ಲಿ, ಅಧಿಕರಣಾರ್ಥದಲ್ಲಿ ಮತ್ತು ಭಾವಾರ್ಥದಲ್ಲಿ ಮಾತ್ರ ಬರುತ್ತದೆಂದು ವ್ಯಾಕರಣ ನಿಯಮವಿದೆ. ಹೀಗಿರಲು ‘‘ರತಿಕರ್ತಾ’’ ಎಂಬ ಅರ್ಥವನ್ನು ವಿವಕ್ಷಿಸಲು ಹೇಗೆ ಸಾಧ್ಯ? ಎಂಬುದು ಇಲ್ಲಿ ಬರುವ ಪ್ರಶ್ನೆ. ಆದರೆ ಯಾವ ಪಾಣಿನಿಯು ಮೂರು ಅರ್ಥಗಳಲ್ಲಿ ಲ್ಯುಟ್ ಪ್ರತ್ಯಯವನ್ನು ವಿಧಿಸಿದ್ದಾನೋ, ಅವನೇ ‘ಕೃತ್ಯಲ್ಯುಟೋ ಬಹುಲಮ್’ ಎಂಬ ಸೂತ್ರವನ್ನು ರಚಿಸಿದ್ದಾನೆ. ‘ಬಹುಲ’ಗ್ರಹಣವನ್ನು ಮಾಡಿದ್ದರಿಂದ ಕರ್ತ್ರರ್ಥದಲ್ಲಿಯೂ ಸಹ ಲ್ಯುಟ್‌ಪ್ರತ್ಯಯವನ್ನು ಹೇಳಬಹುದೆಂದು ಈ ಸೂತ್ರದ ಅಭಿಪ್ರಾಯ. ಆದ್ದರಿಂದ ಪ್ರಕೃತ ಕರ್ತ್ರರ್ಥದಲ್ಲಿ ಲ್ಯುಟ್‌ಪ್ರತ್ಯಯವನ್ನು ಸ್ವೀಕರಿಸಿದ್ದು ಸಾಧುವಾಗಿದೆ.

## ವಿಶೇಷವಿಚಾರ

ಗ್ರಂಥದ ಪ್ರಾರಂಭದಲ್ಲಿ ಭಗವಂತನನ್ನು ನಮಸ್ಕಾರ ಮಾಡುವುದು ಬಹಳ ಮುಖ್ಯ. ತದನಂತರ ಲಕ್ಷ್ಮೀದೇವಿಯ ನಮಸ್ಕಾರವನ್ನು ಮಾಡಲೇಬೇಕು. ಏಕೆಂದರೆ, ಗ್ರಂಥದ ಅಧ್ಯಯನಕ್ಕೆ ಮನಸ್ಸು ಮತ್ತು ಮಾತುಗಳ ಸಿದ್ಧಿ ಇರಬೇಕು. ವಾಕ್ ಮತ್ತು ಮನಸ್ಸುಗಳಿಗೆ ಮಹಾಲಕ್ಷ್ಮೀದೇವಿಯು ಅಭಿಮಾನಿನಿಯಾಗಿರುವಳು. ಆದ್ದರಿಂದ ಅವಳ ಅನುಗ್ರಹವನ್ನು ಅತ್ಯವಶ್ಯವಾಗಿ ಹೊಂದಲೇಬೇಕು. ಅದಕ್ಕಾಗಿ ಗ್ರಂಥದ ಪ್ರಾರಭದಲ್ಲಿ ಲಕ್ಷ್ಮೀದೇವಿಯ ನಮಸ್ಕಾರವನ್ನು ಮಾಡುವುದು ಅತ್ಯವಶ್ಯ.

ಆದರೆ ಲಕ್ಷ್ಮೀದೇವಿಯನ್ನು ಪ್ರತ್ಯೇಕ ನಮಸ್ಕಾರ ಮಾಡಬಾರದು. ‘ಕ್ಲೇಶೋಽ-

ಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಂ' ಎಂಬ ಮಾತಿನಂತೆ ಲಕ್ಷ್ಮೀದೇವಿಯನ್ನಷ್ಟೇ ನಮಸ್ಕಾರ ಮಾಡಿದರೆ ಅಧಿಕತರವಾದ ಕ್ಲೇಶಕ್ಕೆ ಭಾಗಿಯಾಗುತ್ತಾನೆ. ಆದ್ದರಿಂದ ತನ್ನ ಪತಿಯಾದ ಶ್ರೀಮನ್ನಾರಾಯಣನ ಜೊತೆಯೇ ಲಕ್ಷ್ಮಿಯನ್ನು ನಮಸ್ಕಾರ ಮಾಡಬೇಕು. ಆಗ 'ವಿಷ್ಣುನಾ ಸಹಿತಾ ಧ್ಯಾತಾ ಮಹಾಲಕ್ಷ್ಮೀ ಫಲಪ್ರದಾ । ಸಾಽಪಿ ತುಷ್ಟಿಂ ಪರಾಂ ವ್ರಜೇತ್' ಎಂಬಂತೆ ವಿಷ್ಣುವಿನ ಜೊತೆ ನಮಸ್ಕೃತಳಾದ ಲಕ್ಷ್ಮಿಯು ಮಹಾಫಲವನ್ನು ನೀಡುವಳು.

ಈ ಉದ್ದೇಶದಿಂದ ಪ್ರಕೃತ ಟೀಕಾರಾಯರು ರಮಾಯಾಃ ರಮಣಂ ಎಂಬುದಾಗಿ ಲಕ್ಷ್ಮೀವಿಶಿಷ್ಟನಾದ ಭಗವಂತನಿಗೆ ನಮಸ್ಕಾರವನ್ನು ಮಾಡಿರುತ್ತಾರೆ. ಭಗವಂತನನ್ನು ಪ್ರಧಾನವಾಗಿ ಲಕ್ಷ್ಮಿಯನ್ನು ಉಪಸರ್ಜನದಿಂದ ನಮಿಸಿದ್ದಾರೆ.

ಹೀಗೆ ಗ್ರಂಥದ ಪ್ರಾರಂಭದಲ್ಲಿ ನಮಿಸುವುದರಿಂದ ಭಗವಂತನ ಅನುಗ್ರಹ ಹಾಗೂ ಲಕ್ಷ್ಮೀದೇವಿಯ ಅನುಗ್ರಹ ಅಧ್ಯೇತೃಗಳಿಗೆ ಆಗುತ್ತದೆ.

**ವಿದ್ಯಾರ್ಥಿಗಳೇ ಗಮನಿಸಿ**

ಲಕ್ಷ್ಮೀದೇವಿಯಿಂದ ಪರಮಾತ್ಮನಿಗೆ ಸುಖವು ದೊರಕುವುದಿಲ್ಲ; ತನ್ನಿಂದಲೇ ಲಕ್ಷ್ಮೀದೇವಿಗೆ ಸುಖವು ದೊರಕುತ್ತದೆ. 'ರಮಾಯಾಃ ರಮಣಂ' ಎಂಬ ವಾಕ್ಯಪ್ರಯೋಗದಿಂದ ಲಕ್ಷ್ಮೀದೇವಿಗೆ ಸುಖವನ್ನು ಉಂಟುಮಾಡುವವನು ಎಂಬರ್ಥವು ತಿಳಿಯುತ್ತದೆ.

## ಗುಣಮಾಣಿಕ್ಯಮಂಡನಂ ಎಂಬ ವಿಶೇಷಣದ ಬಗ್ಗೆ

ಮಂದಾರಮಂಜರೀ–

रमारमणस्यैव नम्यत्वे हेतुमाह – **गुणमाणिक्येति** ।। गुणा एव माणिक्यानि तेषां मण्डनमित्यर्थः ।।

ರಮಾರಮಣಸ್ಯೈವ ನಮ್ಯತ್ವೇ ಹೇತುಮಾಹ – ಗುಣಮಾಣಿಕ್ಯೇತಿ ॥ 'ಗುಣಾ ಏವ ಮಾಣಿಕ್ಯಾನಿ, ತೇಷಾಂ ಮಂಡನಮ್' ಇತ್ಯರ್ಥಃ।

ಗ್ರಂಥಕರ್ತೃಗಳು ಲಕ್ಷ್ಮೀನಾರಾಯಣರನ್ನೇ ನಮಸ್ಕರಿಸಲು ಕಾರಣವನ್ನು ನೀಡುತ್ತಿದ್ದಾರೆ 'ಗುಣಮಾಣಿಕ್ಯಮಂಡನಮ್' ಎಂಬುದಾಗಿ. ಭಗವಂತನಲ್ಲಿರುವ ಗುಣಗಳು ಮಾಣಿಕ್ಯದಂತೆ ಅತ್ಯಂತ ಪ್ರಕಾಶಿತವಾಗಿವೆ. ಇಂತಹ ಮಾಣಿಕ್ಯಗಳ ಕಾಂತಿಯಿಂದ ನಮ್ಮಲ್ಲಿರುವ ಅಜ್ಞಾನವೆಲ್ಲವೂ ನಾಶವಾಗುತ್ತದೆಂದು ಇದರ ಅರ್ಥ. ಪರಮಾತ್ಮನಲ್ಲಿರುವ ಗುಣಗಳೇ ಮಾಣಿಕ್ಯಗಳಾಗಿವೆ. ಅಂತಹ ಮಾಣಿಕ್ಯಗಳಿಂದ ಪರಮಾತ್ಮನಿಗೆ ಭೂಷಣವಲ್ಲ. ಹೊರತಾಗಿ ಪರಮಾತ್ಮನಿಂದಲೇ ಮಾಣಿಕ್ಯಗಳಿಗೆ ಭೂಷಣವೆಂದು ತಿಳಿಯಬೇಕು. ಆದ್ದರಿಂದ 'ಗುಣಾಃ ಏವ ಮಾಣಿಕ್ಯಾನಿ = ಗುಣಮಾಣಿಕ್ಯಾನಿ, ಗುಣಮಾಣಿಕ್ಯಾನಾಂ ಮಂಡನಂ ಗುಣಮಾಣಿಕ್ಯಮಂಡನಂ' ಎಂಬ ವಿಗ್ರಹವನ್ನು ತಿಳಿಯಬೇಕು.

## ವಿಶೇಷವಿಚಾರ

ಗ್ರಂಥದ ಪ್ರಾರಂಭದಲ್ಲಿ ಅನೇಕ ದೇವತೆಗಳನ್ನು ನಮಿಸಬಹುದು. ನಾರಾಯಣನನ್ನೇ ಏಕೆ ನಮಿಸಬೇಕು? ಎಂಬ ಪ್ರಶ್ನೆಗೆ ಗುಣಮಾಣಿಕ್ಯಮಂಡನಂ ಎಂಬುದರಿಂದ ಉತ್ತರಿಸಿದ್ದಾರೆ. ಕೇವಲ ಗುಣಗಳಿಂದಲೇ ಕೂಡಿರುವವನು ಭಗವಂತ ಮಾತ್ರ. ಉಳಿದವರಲ್ಲಿ ದೋಷಗಳು ಕೂಡ ಇರುತ್ತವೆ. ಗುಣಪೂರ್ಣನಾದ್ದರಿಂದ ಸರ್ವೋತ್ತಮನಾದ ಭಗವಂತನನ್ನೇ ಗ್ರಂಥದ ಆರಂಭದಲ್ಲಿ ನಮಸ್ಕಾರ ಮಾಡಬೇಕು.

ಪರಮಾತ್ಮನು ಗುಣಗಳೆಂಬ ಮಾಣಿಕ್ಯಗಳಿಂದ ಅಲಂಕೃತನಾಗಿದ್ದಾನೆ ಎಂಬರ್ಥವು ಗುಣಮಾಣಿಕ್ಯಮಂಡನಂ ಎಂಬುದರಿಂದ ತಿಳಿಯುತ್ತದೆ. ಆದರೆ ಗುಣಗಳೆಂಬ ಮಾಣಿಕ್ಯಗಳಿಗೆ ಪರಮಾತ್ಮನು ಅಲಂಕಾರನಾಗಿದ್ದಾನೆಂಬ ಅರ್ಥವನ್ನು ತಿಳಿಯಬೇಕು.

ಗುಣಗಳಿಂದ ಇವನು ಅಲಂಕೃತನಾಗಿದ್ದಾನೆಂದು ತಿಳಿಯಬಾರದು. ಗುಣಗಳಿಗೆ ಇವನು ಅಲಂಕಾರನಾಗಿದ್ದಾನೆಂದೇ ಇದರ ಅಭಿಪ್ರಾಯ.

**ವಿದ್ಯಾರ್ಥಿಗಳೇ ಗಮನಿಸಿ**

ವಸ್ತುತಃ ಗುಣಗುಣಿಗಳಿಗೆ ಅಭೇದವಿರುವುದರಿಂದ ಪರಮಾತ್ಮನು ಬೇರೆ-ಯಲ್ಲ; ಅವನ ಗುಣಗಳು ಬೇರೆಯಲ್ಲ. ಹೀಗಿರುವಾಗ ಗುಣಗಳಿಂದ ಇವನಿಗೆ ಅಲಂಕಾರ ಎಂದು ಹೇಳಿದರೆ ಏನು ತಪ್ಪು? ಎಂಬ ಪ್ರಶ್ನೆ ಬರುತ್ತದೆ.

ಆದರೆ ವಿಶೇಷ ಬಲದಿಂದ ಗುಣಗಳು ಪರಮಾತ್ಮನಿಂದ ಅಲಂಕೃತವಾಗಿದೆ ಎಂದು ಹೇಳುವುದೇ ಉಚಿತ. ವಿಪರೀತವಾಗಿ ಗುಣಗಳಿಂದ ಪರಮಾತ್ಮನು ಅಲಂಕೃತನಾಗಿದ್ದಾನೆಂದು ಹೇಳಿದರೆ ಶ್ರೀಹರಿಯಲ್ಲಿ ನ್ಯೂನತೆಯ ಶಂಕೆ ಬಂದೀತು!

## ತತ್ವಪ್ರಕಾಶಿಕಾವ್ಯಾಖ್ಯಾಂ ಎಂಬುದರ ಬಗ್ಗೆ

ಮಂದಾರಮಂಜರೀ–

**तत्वप्रकाशिकाव्याख्यामिति** ।। ब्रह्ममीमांसासहितवेदान्तविष-यादितत्वप्रकाशिकाव्याख्यामित्यर्थः ।

**ತತ್ವಪ್ರಕಾಶಿಕಾವ್ಯಾಖ್ಯಾಮಿತಿ ॥ ಬ್ರಹ್ಮಮೀಮಾಂಸಾಸಹಿತವೇದಾಂತವಿಷ-ಯಾದಿತತ್ವಪ್ರಕಾಶಿಕಾವ್ಯಾಖ್ಯಾಮ್ ಇತ್ಯರ್ಥಃ।**

ತತ್ವಪ್ರಕಾಶಿಕೆಯ ವ್ಯಾಖ್ಯಾನವನ್ನು ಮಾಡುತ್ತಿದ್ದೇನೆ ಎಂಬುದಾಗಿ ಪ್ರತಿಜ್ಞೆಯನ್ನು ಮಾಡುತ್ತಿದ್ದಾರೆ. 'ತತ್ವಪ್ರಕಾಶಿಕಾವ್ಯಾಖ್ಯಾಂ' ಎಂಬುದರ ಅರ್ಥ ಹೀಗಿದೆ– ಬ್ರಹ್ಮಮೀಮಾಂಸಾಶಾಸ್ತ್ರದಿಂದ ತಿಳಿಯಲ್ಪಟ್ಟ ಸಮಗ್ರ ವೇದ, ಉಪನಿಷತ್ತುಗಳಲ್ಲಿರುವ ಪ್ರಮೇಯಗಳನ್ನು ಶ್ರೀಮದಾಚಾರ್ಯರು ರಚಿಸಿ-ರುವ ತತ್ವಪ್ರಕಾಶಿಕಾ ಗ್ರಂಥವು ಪ್ರತಿಪಾದಿಸುತ್ತದೆ. ಇಂತಹ ತತ್ವಪ್ರಕಾಶಿಕೆ-ಯನ್ನು ವ್ಯಾಖ್ಯಾನಿಸುತ್ತಿದ್ದೇವೆ ಎಂದರ್ಥ.

**ಜಿಜ್ಞಾಸುಗಳೇ**
**ಈ ಅಂಶಗಳನ್ನು ನೆನಪಿಡಿ**

★ ಈ ಗ್ರಂಥಕ್ಕೆ ಪ್ರಸಿದ್ಧವಾದ ಹೆಸರು ಉಪಾಧಿಖಂಡನ.

★ ಈ ಗ್ರಂಥಕ್ಕೆ ಶ್ರೀಜಯತೀರ್ಥರು ಇಟ್ಟ ಹೆಸರು 'ತತ್ವಪ್ರಕಾಶಿಕಾ'.

★ ಶ್ರೀಮದಾಚಾರ್ಯರ ಗ್ರಂಥಗಳನ್ನು ಅವರ ಮುಖದಿಂದ ಪಾಠ ಕೇಳಿ ಬರೆದಿಟ್ಟವರು ಶ್ರೀಹೃಷೀಕೇಶತೀರ್ಥರು. ಇವರು ಬರೆದಿರುವಂತೆ ಈ ಗ್ರಂಥದ ಹೆಸರು ಮಾಯಾವಾದದೂಷಣ. ಲೋಕಪ್ರಸಿದ್ಧವಾದ ಮಾಯಾವಾದ-ಖಂಡನ ಎಂಬ ಗ್ರಂಥದ ಮುಂದುವರೆದ ಭಾಗವೇ ಈ ಗ್ರಂಥ. ಮಾಯಾ-ವಾದಖಂಡನಕ್ಕೆ ಶ್ರೀಮದಾಚಾರ್ಯರು 'ಮಾಯಾವಾದದೂಷಣಂ' ಎಂಬ ಹೆಸರನ್ನಿಟ್ಟಿರುವರು. ಅದೇ ಮುಂದುವರೆದ ಭಾಗವಾದ್ದರಿಂದ ಇದಕ್ಕೂ ಅದೇ ಹೆಸರನ್ನು ಇಟ್ಟಿರಬಹುದು.

★ ಗ್ರಂಥ ಗುರುತಿಸುವುದಕ್ಕೆ ಶ್ರೀಹೃಷೀಕೇಶತೀರ್ಥರ ಅಭಿಪ್ರಾಯದಲ್ಲಿ ಮಾಯಾವಾದದೂಷಣಂ ಎಂದು ತಿಳಿಯುವುದಕ್ಕಿಂತ 'ಉಪಾಧಿದೂಷಣಂ' ಎಂದು ತಿಳಿಯಬಹುದು.

★ ಅಭೇದವು ಶಾಸ್ತ್ರಕ್ಕೆ ವಿಷಯವಾಗುವುದಿಲ್ಲ. ಏಕೆಂದರೆ ಅಜ್ಞಾನ ಅದ್ವೈತಿಗಳ ಪ್ರಕಾರ ಕೂಡುವುದಿಲ್ಲ. ಆದ್ದರಿಂದಲೇ ಅಜ್ಞಾತನಾದ ಅಧಿ-ಕಾರಿಯು ಇರುವುದಿಲ್ಲ. ಅಜ್ಞಾನನಿವೃತ್ತಿರೂಪವಾದ ಪ್ರಯೋಜನವೂ ಇರುವುದಿಲ್ಲ. ಈ ಮೂರು ಇಲ್ಲದಿರುವುದರಿಂದ ಸಂಬಂಧವೂ ಇಲ್ಲ. ಹೀಗೆ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಇಲ್ಲವೆಂದು ಮಾಯಾ-ವಾದದೂಷಣದಲ್ಲಿ ನಿರೂಪಣೆ ಮಾಡಿದರು. ಅದನ್ನೇ ಮತ್ತೊಂದು ಪ್ರಕಾರದಲ್ಲಿ ಇಲ್ಲಿ ನಿರೂಪಣೆ ಮಾಡುತ್ತಿದ್ದಾರೆ. ಮಾಯಾವಾದದೂಷಣವು ಗದ್ಯರೂಪವಾಗಿದೆ. ಇದು ಪದ್ಯರೂಪವಾಗಿದೆ. ಅದಕ್ಕಿಂತ ಗಾತ್ರದಲ್ಲಿ ಇದು ದೊಡ್ಡದು.

★ ಶ್ರೀಜಯತೀರ್ಥರು ಇದಕ್ಕೆ ತತ್ವಪ್ರಕಾಶಿಕಾ ಎಂಬ ಹೆಸರನ್ನಿಡಲು

'ಮಾಯಾವಾದತಮೋವ್ಯಾಪ್ತಂ ಇತಿ ತತ್ತ್ವದೃಶಾ ಜಗತ್ ।
ಭಾತಂ ಸರ್ವಜ್ಞಸೂರ್ಯೇಣ ಪ್ರೀತಯೇ ಶ್ರೀಪತೇಃ ಸದಾ ॥

ಎಂಬ ಶ್ರೀಮದಾಚಾರ್ಯರ ಕೊನೆಯ ಶ್ಲೋಕವು ಆಧಾರವಾಗಿರಬಹುದು.

★ ಶ್ರೀಜಯತೀರ್ಥರು ಇಟ್ಟಿರುವ ತತ್ತ್ವಪ್ರಕಾಶಿಕಾ ಎಂಬ ಹೆಸರನ್ನೇ ಶ್ರೀವ್ಯಾಸತೀರ್ಥರು ಹಾಗೂ ಶ್ರೀನಿವಾಸತೀರ್ಥರು ಅನುಸರಿಸಿದ್ದಾರೆ.

★ ಮಾಯಾವಾದವೆಂಬ ಅಂಧಕಾರದಿಂದ ತುಂಬಿದ ಜಗತ್ತನ್ನು ವೇದ, ಉಪನಿಷತ್ತುಗಳ ಅರ್ಥವನ್ನು ಪ್ರಕಾಶಿಸುವ ಮೂಲಕ ಸೂರ್ಯನ ಉದಯ-ವಾಗಿದೆ. ಇದರಿಂದ ಜಗತ್ತು ಬೆಳಗುತ್ತಿದೆ. ಆದ್ದರಿಂದ ಈ ಗ್ರಂಥಕ್ಕೆ ತತ್ತ್ವಪ್ರಕಾಶಿಕಾ ಎಂಬ ಹೆಸರು ಸಾರ್ಥಕವಾಗಿದೆ.

## ಕರಿಷ್ಯಾಮೋ ಯಥಾಮತಿ ಎಂಬುದರ ಬಗ್ಗೆ

**ಮಂದಾರಮಂಜರೀ–**

**करिष्याम** इति परसमवेतक्रियाफलाभिधायिना परस्मैपदेन शिष्याननुजिघृक्षया ग्रन्थो निर्मीयत इति सूचयति ।

'ಕರಿಷ್ಯಾಮಃ' ಇತಿ ಪರಸಮವೇತಕ್ರಿಯಾಫಲಾಭಿಧಾಯಿನಾ ಪರಸ್ಮೈ-ಪದೇನ ಶಿಷ್ಯಾನ್ ಅನುಜಿಘೃಕ್ಷಯಾ ಗ್ರಂಥೋ ನಿರ್ಮೀಯತ ಇತಿ ಸೂಚಯತಿ।

'ಕರಿಷ್ಯಾಮಃ' ಎಂಬ ಧಾತುವು ಪರಸ್ಮೈಪದಿಯಾಗಿದೆ. ಕೆಲವು ಧಾತು-ಗಳು ಕೇವಲ ಆತ್ಮನೇಪದದಲ್ಲಿರುತ್ತವೆ. 'ಕೃಞ್' ಎಂಬ ಧಾತು ಪರಸ್ಮೈಪದ ಹಾಗೂ ಆತ್ಮನೇಪದದಲ್ಲಿಯೂ ಇರುತ್ತದೆ. ಆದ್ದರಿಂದ ಇವುಗಳನ್ನು ಉಭಯ-ಪದಿ ಎನ್ನುತ್ತಾರೆ. ಪ್ರಕೃತ ಗ್ರಂಥಕಾರರು 'ಕರಿಷ್ಯಾಮಹೇ' ಎಂಬ ರೂಪವನ್ನೂ ಪ್ರಯೋಗಿಸಬಹುದಿತ್ತು. ಆದರೆ 'ಕರಿಷ್ಯಾಮಃ' ಎಂದು ಪರಸ್ಮೈಪದದಲ್ಲಿ ಪ್ರಯೋಗಿಸಿದ್ದರಿಂದ ಪ್ರಮೇಯವಿಶೇಷವೊಂದನ್ನು ತಿಳಿಸಿದ್ದಾರೆ. ಪರಸಮ-

ವೇತಕ್ರಿಯೆಯನ್ನಷ್ಟೇ ಪರಸ್ಮೈಪದಿಯು ತಿಳಿಸುತ್ತದೆ. ಧಾತುವಿನಿಂದ ಪ್ರತಿ-ಪಾದ್ಯವಾದ ಯಾವ ಕ್ರಿಯೆಯು ಇದೆಯೋ ಅಂತಹ ಕ್ರಿಯೆಯ ಫಲವು ಪರಗಾಮಿನಿಯಾಗಿದ್ದರೆ ಪರಸ್ಮೈಪದಿಯಾಗುತ್ತದೆ. ಈ ಗ್ರಂಥದಿಂದ ತತ್ವಜ್ಞಾನವು ಶಿಷ್ಯರಿಗೆ ದೊರೆಯುತ್ತದೆ. ಆದ್ದರಿಂದ ಶಿಷ್ಯರ ಅನುಗ್ರಹಕ್ಕೋಸ್ಕರ ಈ ಗ್ರಂಥವನ್ನು ನಿರ್ಮಾಣ ಮಾಡಲಾಗಿದೆ ಹೊರತು ತಮಗೇನೂ ಪ್ರಯೋಜನವಿಲ್ಲ ಎಂದು ಪರಸ್ಮೈಪದದಿಂದ ಸೂಚಿಸಿರುತ್ತಾರೆ.




ಕರಿಷ್ಯಾಮಃ ಎಂಬ ಪರಸ್ಮೈಪದದ ಪ್ರಯೋಗದಿಂದ ಪರಸ್ಮೈಪದವು ಪರಸಮವೇತಕ್ರಿಯಾಫಲವನ್ನು ಹೇಳುತ್ತದೆ. ಮತ್ತೊಬ್ಬರಿಗೆ ಫಲವು ದೊರೆಯುತ್ತದೆ ಎಂಬುದು ಇದರ ಅಭಿಪ್ರಾಯ. ಈ ಗ್ರಂಥದಿಂದ ಯಾವ ಫಲವು ದೊರೆಯುತ್ತದೋ, ಅದು ಶಿಷ್ಯರಿಗೆ ಎಂದು ಸೂಚನೆ ಮಾಡುವು-ದಕ್ಕಾಗಿ ಶಿಷ್ಯರ ಮೇಲಿನ ಅನುಗ್ರಹ ಬುದ್ಧಿಯಿಂದ ಕರಿಷ್ಯಾಮಃ ಎಂಬ ಪರಸ್ಮೈಪದವನ್ನು ಪ್ರಯೋಗಿಸಿದ್ದಾರೆ. ತಮಗೇ ಇದರಿಂದ ಪ್ರಯೋಜನವಿರು-ವುದಾಗಿದ್ದಲ್ಲಿ ಕರಿಷ್ಯಾಮಹೇ ಎಂಬ ಆತ್ಮನೇ ಪದವನ್ನು ಪ್ರಯೋಗಿಸುತ್ತಿದ್ದರು.

★ ★ ★ ★ ★ ★

ಉಪಾಧಿಖಂಡನ ಶ್ರೀನಿವಾಸತೀರ್ಥೀಯ ಟಿಪ್ಪಣೀ

# ಉಪಾಧಿಖಂಡನವ್ಯಾಖ್ಯಾವಿವೃತಿ

**पूर्णबोधकरसेवितपादं सज्जनेष्टदमनंतसद्गुणम् ।**
**वासवीहृदयनन्दनं हरिं बादरायणमहं भजेऽनिशम् ।। १ ।।**

ಪೂರ್ಣಬೋಧಕರಸೇವಿತಪಾದಂ
ಸಜ್ಜನೇಷ್ಟದಮನಂತಸದ್ಗುಣಮ್ ।
ವಾಸವೀಹೃದಯನಂದನಂ ಹರಿಂ
ಬಾದರಾಯಣಮಹಂ ಭಜೇಽನಿಶಮ್ ॥೧॥

ಶ್ರೀವೇದವ್ಯಾಸದೇವರು ಶ್ರೀಮದಾಚಾರ್ಯರ ಕರಕಮಲಗಳಿಂದ ಆರಾಧ್ಯವಾದ ಪಾದಕಮಲಗಳುಳ್ಳವರಾಗಿದ್ದಾರೆ. ಸಕಲಸಜ್ಜನರ ಮನೋಭಿಲಾಷೆಗಳನ್ನು ನೀಡುವವರಾಗಿದ್ದಾರೆ. ಅನಂತವಾದ ಸದ್ಗುಣಗಳುಳ್ಳವರಾಗಿದ್ದಾರೆ. ಇಂತಹ ಬಾದರಾಯಣದೇವರನ್ನು ನಿರಂತರವಾಗಿ ಭಜಿಸುತ್ತೇನೆ.

भाविब्रह्मतयाम्नातानन्दतीर्थानहं मुहुः ।
जयराजमुनींश्चापि वन्दे वेदेशयोगिनः ।। २ ।।

ಭಾವಿಬ್ರಹ್ಮತಯಾಮ್ನಾತಾನಂದತೀರ್ಥಾನಹಂ ಮುಹುಃ ।
ಜಯರಾಜಮುನೀಂಶ್ಚಾಪಿ ವಂದೇ ವೇದೇಶಯೋಗಿನಃ ॥೨॥

ಭಾವಿಬ್ರಹ್ಮರೆಂದು ಶ್ರುತಿಗಳಿಂದ ಪ್ರಸಿದ್ಧರಾಗಿರುವ ಶ್ರೀಮದಾಚಾರ್ಯರನ್ನು ಮತ್ತೆ ಮತ್ತೆ ನಮಿಸುತ್ತೇನೆ. ಶ್ರೀಮಜ್ಜಯತೀರ್ಥರನ್ನು ಶ್ರೀವೇದೇಶತೀರ್ಥರನ್ನು ನಮಸ್ಕಾರ ಮಾಡುತ್ತೇನೆ.

प्रणम्य यादवाचार्यगुरूणां पादपङ्कजे ।
तत्वप्रकाशिकाव्याख्यां व्याकुर्वे तत्कृपाबलात् ।। ३ ।।

ಪ್ರಣಮ್ಯ ಯಾದವಾಚಾರ್ಯಗುರೂಣಾಂ ಪಾದಪಂಕಜೇ ।
ತತ್ವಪ್ರಕಾಶಿಕಾವ್ಯಾಖ್ಯಾಂ ವ್ಯಾಕುರ್ವೇ ತತ್ಕೃಪಾಬಲಾತ್ ॥೩॥

ಶ್ರೀಯಾದವಾರ್ಯಗುರುಗಳ ಪಾದಕಮಲಗಳಲ್ಲಿ ಸಾಷ್ಟಾಂಗ ನಮಸ್ಕರಿಸಿ, ಅವರ ಕೃಪೆಯ ಬಲದಿಂದ ತತ್ವಪ್ರಕಾಶಿಕಾವ್ಯಾಖ್ಯಾನವನ್ನು ಯಥಾಮತಿ ವ್ಯಾಖ್ಯಾನಿಸುತ್ತೇನೆ.

## ವಿಘ್ನಪರಿಹಾರಕ್ಕಾಗಿ ಮಂಗಳಾಚರಣೆ

ಶ್ರೀನಿವಾಸತೀರ್ಥೀಯ –

**सर्वज्ञकल्पाष्टीकाकारा जयतीर्थश्रीमच्चरणास्तत्त्वप्रकाशिकापर-पर्यायस्योपाधिखण्डनस्य व्याख्यां कर्तुकामाः स्वचिकीर्षितस्य ग्रन्थस्य निर्विघ्नेन परिसमाप्त्यर्थं स्वेष्टदेवतानमस्काररूपं मङ्गळं मनसि कृत्वा शिष्यशिक्षायै ग्रन्थादावुपनिबध्नतः स्वचिकीर्षितं प्रतिजानते – रमाया रमणमिति ।।**

**ಸರ್ವಜ್ಞಕಲ್ಪಾಷ್ಟೀಕಾಕಾರಾ ಜಯತೀರ್ಥಶ್ರೀಮಚ್ಚರಣಾಃ ತತ್ವಪ್ರಕಾಶಿಕಾ-ಪರಪರ್ಯಾಯಸ್ಯ ಉಪಾಧಿಖಂಡನಸ್ಯ ವ್ಯಾಖ್ಯಾಂ ಕರ್ತುಕಾಮಾಃ ಸ್ವ-ಚಿಕೀರ್ಷಿತಸ್ಯ ಗ್ರಂಥಸ್ಯ ನಿರ್ವಿಘ್ನೇನ ಪರಿಸಮಾಪ್ತ್ಯರ್ಥಂ ಸ್ವೇಷ್ಟದೇವತಾ-ನಮಸ್ಕಾರರೂಪಂ ಮಂಗಳಂ ಮನಸಿ ಕೃತ್ವಾ, ಶಿಷ್ಯಶಿಕ್ಷಾಯೈ ಗ್ರಂಥಾದೌ ಉಪನಿಬಧ್ನತಃ ಸ್ವಚಿಕೀರ್ಷಿತಂ ಪ್ರತಿಜಾನೀತೇ – ರಮಾಯಾ ರಮಣಮ್ ಇತಿ ।।**

ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕಾರರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥ ಶ್ರೀಮಚ್ಚರಣರು ಶ್ರೀಮದಾಚಾರ್ಯರು ವಿರಚಿಸಿದ ತತ್ವಪ್ರಕಾಶಿಕಾ ಎಂಬ ಮತ್ತೊಂದು ಹೆಸರುಳ್ಳ ಉಪಾಧಿಖಂಡನ ಗ್ರಂಥಕ್ಕೆ ವ್ಯಾಖ್ಯಾನ ಮಾಡಲು ಇಚ್ಛಿಸುತ್ತಿದ್ದಾರೆ. ತಾವು ವ್ಯಾಖ್ಯಾನ ಮಾಡಲು ಹೊರಟಿರುವ ಗ್ರಂಥವು ವಿಘ್ನವಿಲ್ಲದೆ ಪರಿಸಮಾಪ್ತಿಯಾಗಬೇಕು. ಈ ದೃಷ್ಟಿಯಿಂದ ತಮಗೆ ಇಷ್ಟನಾದ ದೇವನನ್ನು ನಮಸ್ಕಾರ ರೂಪವಾದ ಮಂಗಳವನ್ನು ಮನಸ್ಸಿನಲ್ಲಿ ಆಚರಿಸಿದ್ದಾರೆ. ಅದನ್ನು ಶಿಷ್ಯರಿಗೆ ಶಿಕ್ಷಣೆ ಮಾಡುವುದಕ್ಕಾಗಿ ಗ್ರಂಥದ ಪ್ರಾರಂಭದಲ್ಲಿ ಉಪನಿಬಂಧನೆ ಮಾಡುತ್ತಿದ್ದಾರೆ. ಹಾಗೂ ತಾವು ಯಾವ ಗ್ರಂಥವನ್ನು ಬರೆಯಲು ಹೊರಟಿದ್ದಾರೋ ಅದರ ಪ್ರತಿಜ್ಞೆಯನ್ನು ''ರಮಾಯಾಃ ರಮಣಂ'' ಎಂಬ ಶ್ಲೋಕದಿಂದಲೇ ತಿಳಿಸಿದ್ದಾರೆ.

## ಪ್ರಮೇಯವಿಶೇಷ

ಭಗವಂತನು ಮಾತ್ರ ಸರ್ವಜ್ಞನು ಅವನನ್ನು ಬಿಟ್ಟರೆ ಲಕ್ಷ್ಮೀದೇವಿ ಹಾಗೂ ಋಜುಗಣಸ್ಥರು ಸರ್ವಜ್ಞರೆನಿಸುತ್ತಾರೆ. ಆದರೂ ಭಗವದ್ವಿಷಯದಲ್ಲಿ ಇವರಿಗೆ ಸಾರ್ವಜ್ಞ್ಯ ಇರುವುದಿಲ್ಲ. ಋಜುಗಣಸ್ಥರನ್ನು ಬಿಟ್ಟು ಉಳಿದ ದೇವತೆಗಳಿಗೆ ಜಗತ್ತಿನ ವಿಷಯದಲ್ಲೂ ಸಾರ್ವಜ್ಞ್ಯ ಇರುವುದಿಲ್ಲ. ಇದು ನಮ್ಮ ಸಿದ್ಧಾಂತದ ಮುಖ್ಯಪ್ರಮೇಯ.

ಅನೇಕ ಟಿಪ್ಪಣಿಗಳಲ್ಲಿ ಶ್ರೀಮಟ್ಟೀಕಾಕೃತ್ಪಾದರನ್ನು ಸರ್ವಜ್ಞಕಲ್ಪಃ ಎಂದೇ ಗುರುತಿಸುತ್ತಾರೆ. ಶ್ರೀಮಟ್ಟೀಕಾಕೃತ್ಪಾದರ ಗ್ರಂಥವು ಎಲ್ಲಿಯೂ ಅಜ್ಞಾನ ವಿಪರೀತಜ್ಞಾನಗಳಿಂದ ಕೂಡಿರುವುದಿಲ್ಲ. ಆದ್ದರಿಂದ ಇವರು ಸರ್ವಜ್ಞರಾಗದಿದ್ದರೂ ಸರ್ವಜ್ಞರಂತೆ ಇದ್ದಾರೆಂಬ ಭಾವನೆಯಿಂದ ಎಲ್ಲಾ ಟಿಪ್ಪಣಿಕಾರರೂ ಸರ್ವಜ್ಞಕಲ್ಪಾಃ ಎನ್ನುತ್ತಾರೆ.

## ಮಂಗಳ ಎಂಬ ಶಬ್ದದ ನಿಷ್ಪತ್ತಿ

ವಿಶೇಷವಿಚಾರ– ಮಗಿ ಧಾತುವಿಗೆ ಅಲುಚ್ ಪ್ರತ್ಯಯವು ಬಂದರೆ ಮಂಗಲ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ನಿರಂತರ ಮೇಲಕ್ಕೇರುವುದು ಎಂಬುದು ಇದರ ಅರ್ಥ. ಅಥವಾ ಮಂಗ ಎಂಬುದು ಮಗಿಧಾತುವಿನಿಂದ ನಿಷ್ಪನ್ನವಾದ ಶಬ್ದ-ವಾಗಿದೆ. ಲ ಎಂಬುದು ಲಾತೀತಿ ಎಂಬ ನಿಷ್ಪತ್ತಿಯಿಂದ ಕೊಡುವುದು ಎಂಬರ್ಥ-ದಲ್ಲಿ ಪ್ರಯುಕ್ತವಾಗಿದೆ. ಜ್ಞಾನವನ್ನು ಕೊಡುವುದಾದ್ದರಿಂದ ಮಂಗಲ ಎಂದು ಕರೆಸಿಕೊಳ್ಳುತ್ತದೆ. ಯಾವುದು ನಿರಂತರ ಜ್ಞಾನವನ್ನು ನೀಡುತ್ತಾ, ಹದಿನಾರು ಪ್ರತಿಬಂಧಕಗಳನ್ನು ದಾಟಿ ಹದಿನೇಳನೆಯ ಜೀವನು ಹದಿನೆಂಟನೆಯ ಸ್ಥಿತಿಗೆ ತೆರಳುವಂತೆ ಮಾಡುವುದೋ ಅದೇ ಮಂಗಳ ಎಂದು ಕರೆಸಿಕೊಳ್ಳುತ್ತದೆ.

★ ಉಪನಿಬಂಧನ ಎಂದರೆ ಉಲ್ಲೇಖ ಮಾಡುವುದು ಎಂದರ್ಥ. ಮಂದಾರ-ಮಂಜರೀವ್ಯಾಖ್ಯಾನದಲ್ಲಿ ತಿಳಿಸಿದಂತೆ ಮಂಗಳಾಚರಣೆಯನ್ನು ಸ್ವತಃ ತಾವು ಮಾಡಿರುತ್ತಾರೆ. ಶಿಷ್ಯಶಿಕ್ಷಣೆಗೋಸ್ಕರ ಅದನ್ನು ಉಲ್ಲೇಖ ಮಾಡಿರುತ್ತಾರೆ ಎಂದು ಉಪನಿಬಂಧಶಬ್ದದಿಂದ ಇಲ್ಲಿ ತಿಳಿಸಿರುತ್ತಾರೆ.

## ಗುಣಮಾಣಿಕ್ಯಮಂಡನಂ ಎಂಬುದರ ವಿಗ್ರಹ

ಶ್ರೀನಿವಾಸತೀರ್ಥೀಯ –

**अनेन सकलवाङ्मनसदेवताया रमाया अपि वन्दनं कृतमिति ज्ञातव्यम् । गुणा एव माणिक्यानि तान्येव मण्डनान्यलङ्कारभूतानि यस्य स तथोक्तः, तम् ।।**

**ಅನೇನ ಸಕಲವಾಙ್ಮನಸದೇವತಾಯಾ ರಮಾಯಾ ಅಪಿ ವಂದನಂ ಕೃತಮಿತಿ ಜ್ಞಾತವ್ಯಮ್ । ಗುಣಾ ಏವ ಮಾಣಿಕ್ಯಾನಿ, ತಾನ್ಯೇವ ಮಂಡನಾನಿ, ಅಲಂಕಾರಭೂತಾನಿ ಯಸ್ಯ ಸಃ, ತಥೋಕ್ತಮ್ ॥**

ಸಕಲ ವಾಙ್ಮನಸ್ಸುಗಳಿಗೆ ರಮಾದೇವಿಯು ಅಭಿಮಾನಿನಿಯಾಗಿದ್ದಾಳೆ. ಅವಳ ವಂದನೆಯು ಗ್ರಂಥಾರಂಭದಲ್ಲಿ ಅತ್ಯವಶ್ಯವಾಗಿದೆ. ಆದ್ದರಿಂದ ರಮಾಯಾಃ ರಮಣಂ ಎಂದು ಗ್ರಂಥಕಾರರು ರಮಾಕಾಂತನನ್ನು ನಮಸ್ಕಾರ ಮಾಡಿದ್ದಾರೆ.

ಗುಣಮಾಣಿಕ್ಯಮಂಡನಂ ಎಂಬುದಕ್ಕೆ 'ಗುಣಾಃ ಏವ ಮಾಣಿಕ್ಯಾನಿ ಗುಣಮಾಣಿಕ್ಯಾನಿ; ಗುಣಮಾಣಿಕ್ಯಾನ್ಯೇವ ಮಂಡನಾನಿ ಯಸ್ಯ ಸಃ ಗುಣಮಾಣಿಕ್ಯಮಂಡನಃ; ತಂ ಗುಣಮಾಣಿಕ್ಯಮಂಡನಂ' ಎಂಬ ವಿಗ್ರಹವನ್ನು ತಿಳಿಯಬೇಕು. ಭಗವಂತನಿಗೆ ಗುಣಗಳೇ ಅಲಂಕಾರವಾಗಿವೆ ಎಂದು ಇದರ ಅಭಿಪ್ರಾಯ.

**ಗಮನಿಸಿ**

**ಗುಣಮಾಣಿಕ್ಯಮಂಡನಂ ಎಂಬುದಕ್ಕೆ ಮಂದಾರಮಂಜರಿಯಲ್ಲಿ 'ಗುಣಾಃ ಏವ ಮಾಣಿಕ್ಯಾನಿ ಗುಣಮಾಣಿಕ್ಯಾನಿ, ಗುಣಮಾಣಿಕ್ಯಾನಾಂ ಮಂಡನಂ ಗುಣಮಾಣಿಕ್ಯಮಂಡನಂ' ಎಂಬ ವಿಗ್ರಹವನ್ನು ಆಶ್ರಯಿಸಿ ಗುಣಗಳೆಂಬ ಮಾಣಿಕ್ಯಗಳಿಗೆ ಭಗವಂತನು ಅಲಂಕಾರನಾಗಿದ್ದಾನೆ ಹೊರತು ಗುಣಗಳಿಂದ ತಾನು ಅಲಂಕೃತನಾಗಿಲ್ಲ ಎಂದು ವ್ಯಾಖ್ಯಾನ ಮಾಡಿದ್ದರು. ಶ್ರೀನಿವಾಸತೀರ್ಥರು ಗುಣಗಳೇ ಭಗವಂತನಿಗೆ ಅಲಂಕಾರವಾಗಿವೆ ಎಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ಇವರ ಅಭಿಪ್ರಾಯ ತನ್ನ ಸ್ವರೂಪಭೂತವಾದ ಗುಣಗಳನ್ನು ಬಿಟ್ಟು ಬೇರೆ ಪದಾರ್ಥಗಳಿಂದ ತನಗೆ ಅಲಂಕಾರವಿಲ್ಲ ಎಂದು ತಿಳಿಯಬೇಕು.**

## ಆಚಾರ್ಯರ ಗ್ರಂಥಕ್ಕೆ ಟೀಕೆ ಬರೆಯಲು ದೇವತೆಗಳೇ ಅಧಿಕಾರಿಗಳು

ಶ್ರೀನಿವಾಸತೀರ್ಥೀಯ –

**तत्वप्रकाशिकेति** । श्रुतितन्मीमांसाशास्त्रप्रतिपाद्यभूतं यत्परमपरं च तत्वं तत्प्रकाशयतीति तन्नामकस्य भगवत्पादकृतप्रकरणस्य व्याख्यामित्यर्थः । भगवत्पादीय ग्रन्थव्याख्याने सुराणामेवाधिकारात्कथं तत्र भवतां प्रवृत्तिरित्यत उक्तम् ।। **यथामतीति** ।

**ತತ್ವಪ್ರಕಾಶಿಕೇತಿ ॥ ಶ್ರುತಿತನ್ಮೀಮಾಂಸಾಶಾಸ್ತ್ರಪ್ರತಿಪಾದ್ಯಭೂತಂ ಯತ್ಪರಮಪರಂ ಚ ತತ್ವಂ, ತತ್ಪ್ರಕಾಶಯತೀತಿ ತನ್ನಾಮಕಸ್ಯ ಭಗವತ್ಪಾದಕೃತಪ್ರಕರಣಸ್ಯ ವ್ಯಾಖ್ಯಾಮ್ ಇತ್ಯರ್ಥಃ । ಭಗವತ್ಪಾದೀಯಗ್ರಂಥವ್ಯಾಖ್ಯಾನೇ ಸುರಾಣಾಮೇವಾಧಿಕಾರಾತ್ ಕಥಂ ತತ್ರ ಭವತಾಂ ಪ್ರವೃತ್ತಿಃ? ಇತ್ಯತ ಉಕ್ತಮ್ – ಯಥಾಮತೀತಿ ॥**

ಶ್ರುತಿ ಹಾಗೂ ತದರ್ಥನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಪ್ರತಿಪಾದ್ಯವಾದ ಯಾವ ಪರತತ್ವ ಹಾಗೂ ಅಪರತತ್ವವಿದೆಯೋ ಅಂತಹ ತತ್ವವನ್ನು ಪ್ರಕಾಶ ಗೊಳಿಸುವುದರಿಂದ ಈ ಗ್ರಂಥಕ್ಕೆ ತತ್ವಪ್ರಕಾಶಿಕಾ ಎಂದು ಹೆಸರು. ಇಂತಹ ತತ್ವಪ್ರಕಾಶಿಕಾ ಎಂಬ ಭಗವತ್ಪಾದರ ಗ್ರಂಥಕ್ಕೆ ನಾನು ವ್ಯಾಖ್ಯಾನ ಮಾಡುತ್ತಿದ್ದೇನೆ ಎಂಬುದು 'ತತ್ವಪ್ರಕಾಶಿಕಾವ್ಯಾಖ್ಯಾಂ ಕರಿಷ್ಯಾಮಃ' ಎಂಬುದರ ಅಭಿಪ್ರಾಯವಾಗಿದೆ.

ಶ್ರೀಮದಾಚಾರ್ಯರ ಗ್ರಂಥಗಳಿಗೆ ವ್ಯಾಖ್ಯಾನ ಮಾಡಲು ದೇವತೆಗಳಿಗೆ ಮಾತ್ರ ಅಧಿಕಾರ. ನೀವು ಹೇಗೆ ವ್ಯಾಖ್ಯಾನ ಮಾಡುತ್ತೀರಿ? ಎಂಬ ಪ್ರಶ್ನೆಗೆ 'ಯಥಾಮತಿ' ಎಂದು ಉತ್ತರಿಸಿದ್ದಾರೆ.

### ವಿಶೇಷವಿಚಾರ

ವೇದಾರ್ಥಜ್ಞಾನದಿಂದಲೇ ಮೋಕ್ಷ. ಆ ವೇದಾರ್ಥಕ್ಕೆ ನಿರ್ಣಾಯಕವಾದದ್ದು ಬ್ರಹ್ಮಸೂತ್ರಗಳು. ಆ ಬ್ರಹ್ಮಸೂತ್ರಗಳಿಗೆ ಸಹಾಯಕವಾಗಿ ಈ ಪ್ರಕರಣ ಗ್ರಂಥಗಳು

ಹೊರಟಿವೆ. ಆದ್ದರಿಂದ ವೇದ ಹಾಗೂ ಬ್ರಹ್ಮಸೂತ್ರಗಳಿಂದ ಪ್ರಕಾಶಿತವಾಗುವ ಪರಾಪರತತ್ವಗಳಿಗೆ ಈ ಗ್ರಂಥವು ಪ್ರಕಾಶಕವಾಗಿದೆ ಎಂದು ತಿಳಿಯಬೇಕು.

"ಆನಂದತೀರ್ಥಭಗವದ್ವಚಸಾಂ ವಿಶಿಷ್ಟವ್ಯಾಖ್ಯಾನಕರ್ಮಣಿ ಸುರಾಃ ಹ್ಯಧಿಕಾರಿಣೋಽತ್ರ" ಎಂಬ ಮಾತಿನಂತೆ ದೇವತೆಗಳಿಗೆ ಮಾತ್ರ ಶ್ರೀಮದಾಚಾರ್ಯರ ಮಾತುಗಳನ್ನು ವ್ಯಾಖ್ಯಾನ ಮಾಡಲು ಅಧಿಕಾರವಿದೆ. ನೀವು ಹೇಗೆ ವ್ಯಾಖ್ಯಾನ ಮಾಡಿದಿರಿ? ಎಂದರೆ 'ಯಥಾಮತಿ' ಎಂದು ಉತ್ತರಿಸಿದ್ದಾರೆ. ನನ್ನ ಬುದ್ಧಿಗೆ ನಿಲುಕಿದಷ್ಟು ವ್ಯಾಖ್ಯಾನ ಮಾಡುತ್ತೇನೆ. ಶ್ರೀಮದಾಚಾರ್ಯರ ಪ್ರತಿಯೊಂದು ಮಾತುಗಳು ಸಾವಿರಾರು ಅರ್ಥಗಳಿಂದ ಕೂಡಿರುತ್ತವೆ. ಅದರ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ನಮ್ಮದಲ್ಲ ಎಂಬುದು ಇದರ ಧ್ವನಿ.

ಅಥವಾ ಆನಂದತೀರ್ಥರ ಗ್ರಂಥಗಳಿಗೆ ಟೀಕೆ ಬರೆಯಲು ದೇವತೆಗಳೇ ಅಧಿಕಾರಿಗಳಾದ್ದರಿಂದ ತಾವೂ ಕೂಡ ಅಧಿಕಾರಿಗಳೇ ಆಗಿದ್ದಾರೆ. "ಯಥಾಮತಿ" ಎಂಬುದಕ್ಕೆ ಶಿಷ್ಯರ ಬುದ್ಧಿಗೆ ನಿಲುಕುವಷ್ಟು ತಾನು ಈ ಟೀಕೆಯಲ್ಲಿ ತಿಳಿಸಿದ್ದಾರೆ ಎಂದು ತಿಳಿಯಬೇಕು.

## ಪೀಠಿಕೆ

ಪೀಠಿಕೆ – ಈ ಪ್ರಕರಣಗ್ರಂಥವು ವಿಷಯಪ್ರಯೋಜನಾದಿಗಳಿಂದ ರಹಿತವಾದ್ದರಿಂದ ಅನಾರಂಭಣೀಯವಾಗಿದೆ. ಇದು ಪ್ರಕರಣಗ್ರಂಥವಾದ್ದರಿಂದ ಪ್ರತ್ಯೇಕವಾಗಿ ವಿಷಯಪ್ರಯೋಜನಾದಿಗಳು ಇರಬೇಕಾಗಿಲ್ಲ. ಶಾಸ್ತ್ರೈಕದೇಶಕ್ಕೆ ಪ್ರಕರಣಗ್ರಂಥವು ಸಂಬಂಧವನ್ನು ಪಡೆದಿರುತ್ತದೆ. ಆದ್ದರಿಂದ ಶಾಸ್ತ್ರದ ವಿಷಯ, ಪ್ರಯೋಜನಾದಿಗಳೇ ಪ್ರಕರಣಗ್ರಂಥದ ವಿಷಯಾದಿಗಳಾಗುತ್ತದೆ.

ಆದ್ದರಿಂದ ಈಗ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಕೂಡಿರುವ ಸಮಗ್ರ ವೇದಶಾಸ್ತ್ರಕ್ಕೆ ವಿಷಯ, ಪ್ರಯೋಜನ ಮೊದಲಾದವುಗಳನ್ನು ತೋರಿಸುತ್ತಾರೆ.

## ತತ್ವವಾದದಲ್ಲಿ ಶಾಸ್ತ್ರಾರ್ಥ

ಟೀಕಾ –

परमात्मनोऽत्यन्तभिन्नस्य स्वतश्चिदानन्दाद्यात्मकस्यापि जीवस्य अनाद्यविद्याकामकर्मादिनिमित्तोऽयं परमार्थ एव अन्यथाकारो दुःखाद्यनर्थो न परमेश्वरप्रसादादृते अपगच्छति । न च असाक्षात्कृतोऽसौ प्रसीदति । नच अविदितस्वरूपः शक्यते साक्षात्कर्तुमिति सकलगुणाकरतया निश्शेषदोषगन्धविधुरतया च तं प्रतिपादयितुमशेषाम्नायाः प्रवर्तन्ते । तदुपकरणभूता च ब्रह्ममीमांसेति परमार्थः ।

ಪರಮಾತ್ಮನೋಽತ್ಯಂತಭಿನ್ನಸ್ಯ ಸ್ವತಃ ಚಿದಾನಂದಾದ್ಯಾತ್ಮಕಸ್ಯಾಪಿ ಜೀವಸ್ಯ ಅನಾದ್ಯವಿದ್ಯಾಕಾಮಕರ್ಮಾದಿನಿಮಿತ್ತೋಽಯಂ ಪರಮಾರ್ಥ ಏವ ಅನ್ಯಥಾಕಾರೋ ದುಃಖಾದ್ಯನರ್ಥೋ ನ ಪರಮೇಶ್ವರಪ್ರಸಾದಾದೃತೇ ಅಪಗಚ್ಛತಿ। ನಚ ಅಸಾಕ್ಷಾತ್ಕೃತಃ ಅಸೌ ಪ್ರಸೀದತಿ। ನಚ ಅವಿದಿತಸ್ವರೂಪಃ ಶಕ್ಯತೇ ಸಾಕ್ಷಾತ್ಕರ್ತುಮ್ ಇತಿ ಸಕಲಗುಣಾಕರತಯಾ ನಿಃಶೇಷದೋಷಗಂಧವಿಧುರತಯಾ ಚ ತಂ ಪ್ರತಿಪಾದಯಿತುಮ್ ಅಶೇಷಾಮ್ನಾಯಾಃ ಪ್ರವರ್ತಂತೇ । ತದುಪಕರಣಭೂತಾ ಚ ಬ್ರಹ್ಮಮೀಮಾಂಸಾ ಇತಿ ಪರಮಾರ್ಥಃ।

ಜೀವನು ಪರಮಾತ್ಮನ ದೆಸೆಯಿಂದ ಅತ್ಯಂತ ಭಿನ್ನನಾಗಿದ್ದಾನೆ. ಜ್ಞಾನ, ಆನಂದ ಮೊದಲಾದವುಗಳೆಲ್ಲ ಅವನ ಸ್ವಭಾವವಾಗಿವೆ. ಆದರೂ ಸಹ ಜೀವನು ದುಃಖಿಯೇ ಆಗಿದ್ದಾನೆ. ಏಕೆಂದರೆ ಅವನಲ್ಲಿ ಭಾವರೂಪವಾದ

ಅಜ್ಞಾನ, ದ್ವೇಷ, ಕಾಮ್ಯಕರ್ಮ ಮೊದಲಾದವುಗಳೆಲ್ಲ ಅನಾದಿಕಾಲದಿಂದ ಇರುತ್ತವೆ. ಇವುಗಳಿಂದ ಉಂಟಾಗುವ ದುಃಖ ಮೊದಲಾದ ಅನರ್ಥಗಳು ಜೀವನಲ್ಲಿ ಸ್ವಾಭಾವಿಕವಾಗಿ ಇಲ್ಲದಿದ್ದರೂ ಸತ್ಯವೇ ಆಗಿವೆ. ಇಂತಹ ದುಃಖಾದಿ ಅನರ್ಥಗಳನ್ನು ಪರಿಹರಿಸಿಕೊಳ್ಳಬೇಕೆಂದರೆ ಭಗವಂತನ ಪ್ರಸಾದವನ್ನು ಅಪೇಕ್ಷಿಸಬೇಕು. ಭಗವಂತನ ಪ್ರಸಾದವಿಲ್ಲದೆ ಈ ಅನರ್ಥಗಳು ನಿವೃತ್ತ-ವಾಗುವುದಿಲ್ಲ. ಭಗವಂತನ ಸಾಕ್ಷಾತ್ಕಾರವಾಗದೇ ಅವನ ಪ್ರಸಾದವೂ ದೊರೆಯುವುದಿಲ್ಲ. ಅವನ ಸಾಕ್ಷಾತ್ಕಾರಕ್ಕಾಗಿ ನಿರಂತರ ಧ್ಯಾನವನ್ನು ಮಾಡಬೇಕು. ಆ ಧ್ಯಾನಕ್ಕಾಗಿ ಭಗವಂತನ ಸ್ವರೂಪವನ್ನು ಮೊದಲು ಅವಶ್ಯವಾಗಿ ತಿಳಿಯಬೇಕು. ಅವನ ಸ್ವರೂಪವನ್ನು ತಿಳಿಯದೇ ಧ್ಯಾನ ಮಾಡುವ ಮೂಲಕ ಸಾಕ್ಷಾತ್ಕಾರವನ್ನು ಹೊಂದಲು ಸಾಧ್ಯವಿಲ್ಲ. ಆದ್ದರಿಂದ ಯಾವ ಜಿಜ್ಞಾಸುವು ಸಾಕ್ಷಾತ್ಕಾರವನ್ನು ಅಪೇಕ್ಷಿಸುತ್ತಾ ಮೋಕ್ಷವನ್ನು ಹೊಂದಲು ಇಚ್ಛಿಸುತ್ತಾನೋ, ಅಂತಹವನನ್ನು ಕುರಿತು ವೇದಗಳು ಹೀಗೆ ಹೇಳುತ್ತವೆ – "ಸಮಸ್ತ ಗುಣಗಳಿಂದ ಪೂರ್ಣನು; ಸಕಲದೋಷರಹಿತನು ಈಶ್ವರನಾಗಿ-ದ್ದಾನೆ" ಎಂದು. ಹೀಗೆ ಭಗವಂತನ ಸ್ವರೂಪವನ್ನು ಪ್ರತಿಪಾದಿಸುವುದಕ್ಕಾ-ಗಿಯೇ ಸಕಲ ವೇದಗಳು ಹೊರಟವೆ. ವೇದಗಳಿಂದ ಭಗವಂತನ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕಾಗಿ ಆವಶ್ಯಕವಾದ ಯುಕ್ತಿಗಳನ್ನು ಬ್ರಹ್ಮಮೀಮಾಂಸಾ-ಶಾಸ್ತ್ರವು ಪ್ರತಿಪಾದಿಸುತ್ತದೆ. ಆದ್ದರಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರವು ವೇದಗಳಿಗೆ ಉಪಕರಣಗಳಾಗಿವೆ. ಇಷ್ಟು ವಿಚಾರ ಅತ್ಯಂತ ಸತ್ಯವಾದದ್ದು.

**ಟೀಕೆಯ ಅರ್ಥ** – ಪರಮಾತ್ಮನಃ = ಸರ್ವೋತ್ತಮನಾದ ವಿಷ್ಣುವಿನ ದೆಸೆಯಿಂದ, ಅತ್ಯಂತಭಿನ್ನಸ್ಯ = ಸಂಪೂರ್ಣವಾಗಿ ಭಿನ್ನನಾದ (ಭಾಸ್ಕರರು ಹೇಳುವಂತೆ ಭೇದಾಭೇದ ಹೊಂದದೆ), ಸ್ವತಃ = ಸ್ವಾಭಾವಿಕವಾಗಿ, ಚಿದಾನಂದಾದ್ಯಾತ್ಮಕಸ್ಯಾಪಿ = ಚಿತ್, ಆನಂದ ಇವುಗಳೇ ಶರೀರವಾಗಿ ಉಳ್ಳ, ಜೀವಸ್ಯ = ಅಲ್ಪನಾದ ಜೀವನಿಗೆ, ಅನಾದ್ಯವಿದ್ಯಾ-ಕಾಮಕರ್ಮನಿಮಿತ್ತಃ – ಅನಾದಿ = ಯಾವುದೇ ನಿಮಿತ್ತಗಳಿಲ್ಲದೆ ಅನಾದಿಕಾಲದಿಂದ ಅಂಟಿ-ಕೊಂಡಿರುವ, ಅವಿದ್ಯಾ = ಭಾವರೂಪವಾದ ಅಜ್ಞಾನ, ಕಾಮ = ವಿಷಯಾಭಿಲಾಷೆ, ಕರ್ಮ =

ಕಾಮ್ಯಕರ್ಮ ಹಾಗೂ ನಿಷಿದ್ಧಕರ್ಮ, ಆದಿ = ಮೋಹ ಇವುಗಳ, ನಿಮಿತ್ತಃ = ಕಾರಣದಿಂದ, ಅಯಂ = ಪ್ರತಿನಿತ್ಯ ನಾವು ಅನುಭವಿಸುತ್ತಿರುವ, ಪರಮಾರ್ಥ ಏವ = ಸತ್ಯವೇ ಆಗಿರುವ (ಶುಕ್ತಿರಜತದಂತೆ ಮಿಥ್ಯಾಭೂತವಾಗದ), ಅನ್ಯಥಾಕಾರಃ = ಜೀವ- ಸ್ವರೂಪದ ಸುಖಾದಿಗಳಂತೆ ಸ್ವಾಭಾವಿಕವಲ್ಲದ, ದುಃಖಾದ್ಯನರ್ಥಃ = ದುಃಖ, ಉದ್ವೇಗ ಮೊದಲಾದ ಅನರ್ಥಗಳು, ಪರಮೇಶ್ವರಪ್ರಸಾದಾತ್ = ಸರ್ವೋತ್ತಮನಾದ ಮಹಾವಿಷ್ಣುವಿನ ಅನುಗ್ರಹದ, ಋತೇ = ಹೊರತಾಗಿ, ನಾಪಗಚ್ಛತಿ = ಪರಿಹಾರವಾಗುವುದಿಲ್ಲ. ಅಸೌ = ಇಂತಹ ಮಹಾವಿಷ್ಣುವು, ಅಸಾಕ್ಷಾತ್ಕೃತಃ = ಪ್ರತ್ಯಕ್ಷವಾಗಿ ದರ್ಶನ ಮಾಡದಿದ್ದರೆ, ನ ಚ ಪ್ರಸೀದತಿ = ಪ್ರಸನ್ನನಾಗುವುದಿಲ್ಲ. ಅವಿದಿತಸ್ವರೂಪಃ = ಶ್ರವಣಾದಿಗಳಿಂದ ಪರೋಕ್ಷ-ಜ್ಞಾನವನ್ನು ಹೊಂದದಿದ್ದರೆ(ಮಹಾವಿಷ್ಣುವನ್ನು), ಸಾಕ್ಷಾತ್ಕರ್ತುಂ = ಪ್ರತ್ಯಕ್ಷವಾಗಿ ನೋಡಲು, ನಚ ಶಕ್ಯತೇ = ಸಾಧ್ಯವೇ ಇಲ್ಲ. ಇತಿ = ಈ ಉದ್ದೇಶದಿಂದ, ಸಕಲಗುಣಾಕರತಯಾ = ಎಲ್ಲ ಬಗೆಯ ಸದ್ಗುಣಗಳ ಆಕರನಾದ, ನಿಃಶೇಷದೋಷಗಂಧವಿಧುರತಯಾ – ನಿಃಶೇಷ = ಸಕಲ ವಿಧವಾದ, ದೋಷಗಂಧ = ದೋಷದ ಲೇಶದಿಂದಲೂ, ವಿಧುರತಯಾ = ರಹಿತನಾಗಿರು-ವುದರಿಂದ, ತಂ = ಆ ವಿಷ್ಣುವನ್ನು, ಪ್ರತಿಪಾದಯಿತುಂ = ಪ್ರತಿಪಾದನೆ ಮಾಡುವುದಕ್ಕಾಗಿ, ಅಶೇಷಾಮ್ನಾಯಾಃ = ಬ್ರಾಹ್ಮಣ, ಉಪನಿಷತ್ತು, ಮಂತ್ರ ಮೊದಲಾದ ಪ್ರಭೇದಗಳನ್ನು ಹೊಂದಿರುವ ಸಕಲವಿಧವಾದ ವೇದಗಳೆಲ್ಲವೂ, ಪ್ರವರ್ತಂತೇ = ಹೊರಟಿರುತ್ತವೆ. ಮತ್ತು ತದುಪಕರಣಭೂತ = ವೇದಾರ್ಥನಿರ್ಣಯಕ್ಕೆ ಸಹಕಾರಿಯಾದ, ಬ್ರಹ್ಮಮೀಮಾಂಸಯೋಃ = ಬ್ರಹ್ಮಮೀಮಾಂಸಾಶಾಸ್ತ್ರದ, ಪ್ರವೃತ್ತಿಃ = ಪ್ರವೃತ್ತಿಯು, ಇತಿ = ಇಷ್ಟು ವಿಚಾರವು, ಪರಮಾರ್ಥಃ = ತತ್ತ್ವವಾದದ ಮುಖ್ಯವಾದ ರಹಸ್ಯ .

**ವಿಶೇಷವಿಚಾರ – ಜೀವ ಹಾಗೂ ಪರಮಾತ್ಮರಿಗೆ ಭೇದಾಭೇದವಿದೆ ಎಂದು ಭಾಸ್ಕರರು ಹೇಳುತ್ತಾರೆ. ಅವರ ಮತವನ್ನು ನಿರಾಕರಿಸುವುದಕ್ಕಾಗಿ 'ಅತ್ಯಂತ-ಭಿನ್ನಸ್ಯ' ಎಂದು ಟೀಕೆಯಲ್ಲಿ ಹೇಳಲಾಗಿದೆ.**

**ಆನಂದಾದಿಗಳು ಹೇಗೆ ಸ್ವಾಭಾವಿಕವಾಗಿವೆಯೋ ಅದೇ ರೀತಿ ದುಃಖಾದಿಗಳೂ ಸ್ವಾಭಾವಿಕವಾಗಿಯೇ ಇರಬೇಕು. ಆವಾಗ ಭಗವಂತನ ಪ್ರಸಾದದಿಂದ ದುಃಖಾದಿ-ಗಳ ನಿವೃತ್ತಿಯು ಹೇಗೆ ಉಂಟಾಗುತ್ತದೆ? ಈ ಪ್ರಶ್ನೆಗೆ ಅವಿದ್ಯಾದಿಗಳ ಮೂಲಕ-ವಾಗಿ ದುಃಖಾದಿಗಳು ಜೀವನಿಗೆ ಉಂಟಾಗುತ್ತವೆ ಎಂದು ಉತ್ತರಿಸಿದ್ದಾರೆ. ದುಃಖಾದಿಗಳಿಗೆ ಅವಿದ್ಯೆಯು ಕಾರಣ, ಅವಿದ್ಯೆಗೆ ಮತ್ತೊಂದು ಕಾರಣ ಎಂದರೆ**

ಅನವಸ್ಥಾದೋಷ ಬರುತ್ತದಲ್ಲವೇ? ಈ ಪ್ರಶ್ನೆಗೆ 'ಅನಾದಿ' ಎಂಬ ಪದದಿಂದ ಉತ್ತರಿಸಿದ್ದಾರೆ. ಅವಿದ್ಯೆಯು ಅನಾದಿಯಾಗಿರುವುದರಿಂದ ಅದಕ್ಕೆ ಮತ್ತೊಂದು ನಿಮಿತ್ತವಿರುವುದಿಲ್ಲ. 'ಅವಿದ್ಯೆ' ಎಂದರೆ ಅಜ್ಞಾನವೆಂದರ್ಥ. ಇದು ಭಾವರೂಪ-ವಾಗಿದೆ. 'ಅಜ್ಞಾನ' ಎಂಬಲ್ಲಿರುವ 'ಅ' ಎಂಬುದು ಅಭಾವವೆಂದೂ, ವಿರುದ್ಧ-ವೆಂದೂ ಎರಡು ಅರ್ಥಗಳನ್ನು ನೀಡುತ್ತಿದೆ. ಮೊದಲನೆಯ ಅರ್ಥವನ್ನು ವಿವಕ್ಷಿಸಿದಾಗ ಅಜ್ಞಾನಶಬ್ದಕ್ಕೆ ಜ್ಞಾನದ ಅಭಾವವೆಂದರ್ಥ. ಎರಡನೆಯ ಅರ್ಥವನ್ನು ವಿವಕ್ಷಿಸಿದಾಗ ಜ್ಞಾನಕ್ಕೆ ವಿರುದ್ಧವಾದದ್ದು ಎಂದರ್ಥ. ಸುರರಿಗೆ ವಿರುದ್ಧವಾದ ಅಸುರರು ಹೇಗೆ ಸುರರಂತೆ ಭಾವರೂಪರೇ ಆಗಿದ್ದಾರೋ, ಅದರಂತೆ ಜ್ಞಾನಕ್ಕೆ ವಿರುದ್ಧವಾದ ಅಜ್ಞಾನವೂ ಸಹ ಜ್ಞಾನದಂತೆಯೇ ಭಾವರೂಪವೇ ಆಗಿದೆ. ಸವಿಷಯಕವೂ ಆಗಿದೆಯೆಂದು ತಿಳಿಯಬೇಕು.

ಪ್ರಶ್ನೆ – ದುಃಖಾದ್ಯನರ್ಥಗಳು ಆನಂದಾದಿಗಳಂತೆ ಸ್ವಾಭಾವಿಕವಲ್ಲವೆಂದು ಹೇಳು-ವುದಾದರೆ ಮಿಥ್ಯಾಭೂತವಾಗಿವೆ ಎಂದಂತಾಯಿತು. ಅಪಾರಮಾರ್ಥಿಕವಸ್ತು-ಗಳಿಗೆ ಸ್ವಾಭಾವಿಕವಾಗಿಯೇ ನಿವೃತ್ತಿ ಇರುತ್ತದೆ. ಹೀಗಿರುವಾಗ ಈಶ್ವರನ ಪ್ರಸಾದ-ವನ್ನೇಕೆ ಅಪೇಕ್ಷಿಸಬೇಕು? ಶುಕ್ತಿಯಲ್ಲಿ ತೋರುವ ರಜತದ ನಿವೃತ್ತಿಗೆ ಮತ್ತೊಂದರ ಪ್ರಸಾದದ ಅಪೇಕ್ಷೆ ಇರುವುದಿಲ್ಲವಷ್ಟೆ?

ಉತ್ತರ – "ಪರಮಾರ್ಥಃ ಏವ" ಎಂಬ ಪದದಿಂದ ಇದಕ್ಕೆ ಉತ್ತರಿಸಿದ್ದಾರೆ. ದುಃಖಾದ್ಯನರ್ಥಗಳು ಅಸ್ವಾಭಾವಿಕವಾಗಿದ್ದರೂ ಪಾರಮಾರ್ಥಿಕವಾಗಿವೆ. ಅದಕ್ಕಾಗಿ ಈಶ್ವರನ ಪ್ರಸಾದ ಬೇಕು.

## ಈ ಗ್ರಂಥವೇಕೆ ಹೊರಟಿದೆ

ಮಂದಾರಮಂಜರೀ–

ननु किमर्थमिदं प्रकरणमारभ्यते भगवत्पादैः? न च वेदान्तानां समीमांसानां विषयप्रयोजनादिस्वरूपनिर्णयार्थमारभ्यते, तन्निर्णयश्च वेदान्तादौ जिज्ञासूनां प्रवृत्त्यर्थः, प्रवृत्तिश्च ज्ञानसम्पादनद्वारा मोक्ष-पर्यवसायिनीति वाच्यम् । मोक्षस्य ईश्वरप्रसादैकसाध्यत्वेन ज्ञाना-

नपेक्षणादित्याशङ्क्याह ।। **परमात्मन** इत्यादिना **न चासाक्षात्कृतोऽसौ प्रसीदतीत्**यन्तेन ग्रन्थेन ।।

ನನು ಕಿಮರ್ಥಮಿದಂ ಪ್ರಕರಣಮಾರಭ್ಯತೇ ಭಗವತ್ಪಾದೈಃ? ನಚ ವೇದಾಂತಾನಾಂ ಸಮೀಮಾಂಸಾನಾಂ ವಿಷಯಪ್ರಯೋಜನಾದಿಸ್ವರೂಪ-ನಿರ್ಣಯಾರ್ಥಮಾರಭ್ಯತೇ, ತನ್ನಿರ್ಣಯಶ್ಚ ವೇದಾಂತಾದೌ ಜಿಜ್ಞಾಸೂನಾಂ ಪ್ರವೃತ್ತ್ಯರ್ಥಃ, ಪ್ರವೃತ್ತಿಶ್ಚ ಜ್ಞಾನಸಂಪಾದನದ್ವಾರಾ ಮೋಕ್ಷಪರ್ಯವಸಾಯಿನೀ ಇತಿ ವಾಚ್ಯಮ್ । ಮೋಕ್ಷಸ್ಯ ಈಶ್ವರಪ್ರಸಾದೈಕಸಾಧ್ಯತ್ವೇನ ಜ್ಞಾನಾನಪೇಕ್ಷಣಾ-ದಿತ್ಯಾಶಂಕ್ಯ , ಆಹ – 'ಪರಮಾತ್ಮನಃ' ಇತ್ಯಾದಿನಾ 'ನಚಾಸಾಕ್ಷಾತ್ಕೃತೋಽಸೌ ಪ್ರಸೀದತಿ' ಇತ್ಯಂತೇನ ಗ್ರಂಥೇನ ॥

ಪ್ರಶ್ನೆ – ಆಚಾರ್ಯರು ಈ ಪ್ರಕರಣಗ್ರಂಥವನ್ನು ಯಾವ ಪ್ರಯೋ-ಜನಕ್ಕಾಗಿ ಪ್ರಾರಂಭಿಸುತ್ತಿದ್ದಾರೆ?

ಉತ್ತರ – ಬ್ರಹ್ಮಮೀಮಾಂಸಾಶಾಸ್ತ್ರದಿಂದ ಕೂಡಿರುವ ಸಮಗ್ರ ವೇದ ಹಾಗೂ ಉಪನಿಷತ್ತುಗಳು ಯಾವ ವಿಷಯಗಳನ್ನು ಹೊಂದಿವೆ? ಮತ್ತು ಯಾವ ಪ್ರಯೋಜನವುಳ್ಳವುಗಳಾಗಿವೆ? ಎಂಬುದನ್ನು ನಿರ್ಣಯಿಸಬೇಕಾಗಿದೆ. ಅದಕ್ಕಾಗಿ ಈ ಪ್ರಕರಣವು ಪ್ರಾರಂಭವಾಗುತ್ತಿದೆ.

ಪ್ರಶ್ನೆ – ಸಮಗ್ರ ವೇದ ಹಾಗೂ ಉಪನಿಷತ್ತುಗಳು ಏನನ್ನು ಬೇಕಾದರೂ ಹೇಳಲಿ? ಅವುಗಳು ಇಂತಹ ವಿಷಯವನ್ನೇ ಪ್ರತಿಪಾದಿಸುತ್ತಿವೆಯೆಂಬ ನಿರ್ಣಯವನ್ನು ಏಕೆ ಮಾಡಬೇಕು?

ಉತ್ತರ – ವೇದ ಹಾಗೂ ಉಪನಿಷತ್ತುಗಳ ಅಧ್ಯಯನವನ್ನು ಮಾಡ-ಬೇಕು. ಜಿಜ್ಞಾಸುವರ್ಗಕ್ಕೆ ಅಂಥ ವೇದ ಉಪನಿಷತ್ತುಗಳ ಅಧ್ಯಯನದಲ್ಲಿ ಪ್ರವೃತ್ತಿ ಉಂಟಾಗುವುದಕ್ಕಾಗಿ ಅವುಗಳ ವಿಷಯ, ಪ್ರಯೋಜನ ಮೊದಲಾ-ದವುಗಳನ್ನು ತಿಳಿಯಬೇಕು.

ಪ್ರಶ್ನೆ – ವೇದಾಂತಗಳ ಅಧ್ಯಯನಾದಿಗಳಲ್ಲಿ ಪ್ರವೃತ್ತಿಯಾದರೂ ಏಕೆ?

ಉತ್ತರ – ಪ್ರತಿಯೊಬ್ಬ ಜೀವಿಗೂ ಮೋಕ್ಷದ ಅಪೇಕ್ಷೆ ಇರುತ್ತದೆ. ಮೋಕ್ಷವನ್ನು ಪಡೆಯಬೇಕೆಂದರೆ, ತತ್ವಜ್ಞಾನವನ್ನು ಸಂಪಾದನೆ ಮಾಡಬೇಕು. ಪ್ರವೃತ್ತಿಗಾಗಿ ವಿಷಯ, ಪ್ರಯೋಜನಾದಿಗಳನ್ನು ತಿಳಿಯಬೇಕು. ವೇದಾದಿಗಳ ವಿಷಯಪ್ರಯೋಜನಾದಿಗಳನ್ನು ತಿಳಿಸುವುದಕ್ಕಾಗಿ ಈ ಪ್ರಕರಣವು ಪ್ರಾರಂಭವಾಗುತ್ತಿದೆ.

ಪ್ರಶ್ನೆ – ಮೋಕ್ಷವನ್ನು ಪಡೆಯಬೇಕೆಂದರೆ ತತ್ವಜ್ಞಾನವು ಬೇಕಾಗಿಲ್ಲ. 'ಯಸ್ಯ ಪ್ರಸಾದಾತ್ ಪರಮಾರ್ಥಿರೂಪಾತ್ ಅಸ್ಮಾತ್ ಸಂಸಾರಾತ್ ಮುಚ್ಯತೇ ನಾಪರೇಣ' ಇತ್ಯಾದಿ ಪ್ರಮಾಣಗಳ ಆಧಾರದಿಂದ ಪರಮಾತ್ಮನ ಪ್ರಸಾದವಿದ್ದರೆ ಸಾಕು ಮೋಕ್ಷವು ದೊರೆಯುತ್ತದೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗಿರುವಾಗ ಮೋಕ್ಷಕ್ಕೋಸ್ಕರ ತತ್ವಜ್ಞಾನದ ಅನಿವಾರ್ಯತೆ ಏಕೆ? ಒಂದು ವೇಳೆ ತತ್ವಜ್ಞಾನವು ಅನಿವಾರ್ಯವಾಗಿದ್ದಲ್ಲಿ ವೇದಾಂತಾಧ್ಯಯನದಲ್ಲಿ ತೊಡಗಬೇಕಾಗಿತ್ತು. ಆದ್ದರಿಂದ ಈ ಪ್ರಕರಣವು ಅನಾರಂಭಣೀಯವಾಗಿದೆಯಲ್ಲವೇ?

ಉತ್ತರ – ಈ ಪ್ರಶ್ನೆಗೆ ಗ್ರಂಥಕಾರರು 'ಪರಮಾತ್ಮನೋಽತ್ಯಂತಭಿನ್ನಸ್ಯ' ಎಂಬಲ್ಲಿಂದ ಪ್ರಾರಂಭಿಸಿ 'ಅಸಾಕ್ಷಾತ್ಕೃತಃ ಅಸೌ' ಎಂಬಲ್ಲಿಯವರೆಗೆ ಹೇಳಿರುವ ಮಾತುಗಳಿಂದ ಉತ್ತರವನ್ನು ನೀಡುತ್ತಿದ್ದಾರೆ.

## ದುಃಖಾದಿಗಳು ಸ್ವಾಭಾವಿಕವಲ್ಲ

ಮಂದಾರಮಂಜರೀ–

जीवस्य दुःखाद्यनर्थः परमेश्वरप्रसादादृते नापगच्छतीति सम्बन्धः । ननु दुःखादेरानन्दादिवदनिवृत्तिः किं न स्यात्? इत्यत आह –

**अन्यथाकार इति ।।** आनन्दादिवन्न स्वाभाविकत्वम् अन्तःकरण-धर्मत्वाद्दुःखादीनामिति भावः ।

**'ಜೀವಸ್ಯ ದುಃಖಾದ್ಯನರ್ಥಃ ಪರಮೇಶ್ವರಪ್ರಸಾದಾದೃತೇ ನ ಅಪಗಚ್ಛತಿ' ಇತಿ ಸಂಬಂಧಃ। ನನು ದುಃಖಾದೇರಾನಂದಾದಿವತ್ ಅನಿವೃತ್ತಿಃ ಕಿಂ ನ ಸ್ಯಾತ್?, ಇತ್ಯತ ಆಹ – ಅನ್ಯಥಾಕಾರ ಇತಿ ॥ ಆನಂದಾದಿವತ್ ನ ಸ್ವಾಭಾವಿಕತ್ವಮ್ ಅಂತಃಕರಣಧರ್ಮತ್ವಾತ್ ದುಃಖಾದೀನಾಮಿತಿ ಭಾವಃ।**

ಈ ವಾಕ್ಯದಲ್ಲಿ 'ಜೀವಸ್ಯ ದುಃಖಾದ್ಯನರ್ಥಃ ಪರಮೇಶ್ವರಪ್ರಸಾದಾದ್ ಋತೇ ನ ಅಪಗಚ್ಛತಿ' ಜೀವನಿಗೆ ಸಂಬಂಧಪಟ್ಟ ದುಃಖಾದಿ ಅನರ್ಥಗಳು ಪರಮೇಶ್ವರಪ್ರಸಾದವಿಲ್ಲದೇ ಪರಿಹಾರವಾಗುವುದಿಲ್ಲ' ಎಂದು ಅನ್ವಯ ಮಾಡಿಕೊಳ್ಳಬೇಕು.

ಪ್ರಶ್ನೆ – ಜೀವನ ಸ್ವರೂಪದಲ್ಲಿರುವ ಆನಂದ ಮೊದಲಾದ ಗುಣಗಳಿಗೆ ಎಂದೂ ಸಹ ನಿವೃತ್ತಿ ಇರುವುದಿಲ್ಲ. ಅದರಂತೆ ದುಃಖಾದಿಗಳಿಗೂ ಸಹ ನಿವೃತ್ತಿಯನ್ನು ಒಪ್ಪುವುದು ಬೇಡ. ಆದ್ದರಿಂದ ಗ್ರಂಥದಲ್ಲಿ 'ದುಃಖಾದಿಗಳು ಪರಮಾತ್ಮನ ಪ್ರಸಾದದಿಂದ ನಿವೃತ್ತವಾಗುತ್ತವೆ' ಎಂದು ಹೇಳಿದ್ದು ಹೇಗೆ ಸರಿ?

ಉತ್ತರ – ಈ ಪ್ರಶ್ನೆಗೆ 'ಅನ್ಯಥಾಕಾರಃ' ಎಂಬ ಪದದಿಂದ ಉತ್ತರಿಸಿದ್ದಾರೆ. ಜೀವಸ್ವರೂಪದಲ್ಲಿರುವ ಆನಂದ ಮೊದಲಾದ ಗುಣಗಳು ಸ್ವಾಭಾವಿಕವಾಗಿವೆ. ಅದರಂತೆ ಅಂತಃಕರಣದ ಧರ್ಮಗಳೆನಿಸಿದ ದುಃಖಾದಿಗಳು ಸ್ವಾಭಾವಿಕವಾಗಿಲ್ಲ ಹೊರತು ಆಗಂತುಕವಾಗಿವೆ. ಆಗಂತುಕವಾದ ಧರ್ಮಗಳಿಗೆ ನಾಶವು ಇದ್ದೇ ಇರುತ್ತದೆಯಾದ್ದರಿಂದ ಗ್ರಂಥದಲ್ಲಿ ದುಃಖಾದಿಗಳಿಗೆ ಹೇಳಲ್ಪಟ್ಟ ನಾಶವು ಯುಕ್ತವೇ ಆಗಿದೆ ಎಂದು ತಿಳಿಯಬೇಕು.

## ತತ್ವವಾದದಲ್ಲಿ ದುಃಖಾದಿಗಳು ಔಪಾಧಿಕ

ಮಂದಾರಮಂಜರೀ–

तर्हि मायिमत इव दुःखादीनां मिथ्यात्वं स्यादिति । नेत्याह – **परमार्थत इति ।।** दुःखादीनां स्वरूपेण अन्तःकरणे परमार्थत्वात् तदनुसन्धातृत्वस्य दुःखित्वस्य जीवे परमार्थत्वान्न कस्यापि मिथ्यात्वमित्यर्थः ।

**ತರ್ಹಿ ಮಾಯಿಮತ ಇವ ದುಃಖಾದೀನಾಂ ಮಿಥ್ಯಾತ್ವಂ ಸ್ಯಾದಿತಿ । ನೇತ್ಯಾಹ – ಪರಮಾರ್ಥತ ಇತಿ ॥ ದುಃಖಾದೀನಾಂ ಸ್ವರೂಪೇಣ ಅಂತಃಕರಣೇ ಪರಮಾರ್ಥತ್ವಾತ್ ತದನುಸಂಧಾತೃತ್ವಸ್ಯ ದುಃಖಿತ್ವಸ್ಯ ಜೀವೇ ಪರಮಾರ್ಥತ್ವಾನ್ನ ಕಸ್ಯಾಪಿ ಮಿಥ್ಯಾತ್ವಮಿತ್ಯರ್ಥಃ ॥**

ಪ್ರಶ್ನೆ – ದುಃಖಾದಿಗಳನ್ನು ಸ್ವಾಭಾವಿಕವಲ್ಲವೆಂದು ಹೇಳುತ್ತಿದ್ದೀರಿ. ಹಾಗಾದರೆ ಮಾಯಾವಾದಿಗಳಂತೆ ನೀವೂ ಸಹ ದುಃಖಾದಿಗಳಿಗೆ ಮಿಥ್ಯಾತ್ವ-ವನ್ನು ಒಪ್ಪಿದಂತೆ ಆಗುವುದಿಲ್ಲವೇ?

ಉತ್ತರ – ಈ ಪ್ರಶ್ನೆಯು ತಪ್ಪೆಂದು 'ಪರಮಾರ್ಥತಃ' ಎಂಬ ಪದದಿಂದ ತಿಳಿಸಿದ್ದಾರೆ. ಅಂದರೆ ದುಃಖಾದಿಗಳು ಅಂತಃಕರಣದಲ್ಲಿ ಪಾರಮಾರ್ಥಿಕವಾಗಿ ಇರುತ್ತವೆ. ಆ ದುಃಖವನ್ನು ಜೀವನು ಪಾರಮಾರ್ಥಿಕವಾಗಿಯೇ ಅನುಭ-ವಿಸುತ್ತಿದ್ದಾನೆ. ಆದ್ದರಿಂದ ಜೀವನು ಹೇಗೆ ಪಾರಮಾರ್ಥಿಕನೋ? ದುಃಖಾ-ದಿಗಳೂ ಸಹ ಪಾರಮಾರ್ಥಿಕವಾಗಿಯೇ ಇವೆ.

ಹೀಗಿರುವಾಗ ಯಾವುದಕ್ಕೆ ಮಿಥ್ಯಾತ್ವವನ್ನು ಹೇಳುತ್ತೀರಿ? ಈ ದುಃಖಾದಿಗಳಿಗೆ ಔಪಾಧಿಕತ್ವವನ್ನು ಹೇಳಬಹುದೇ ಹೊರತು ಮಿಥ್ಯಾತ್ವವನ್ನು ಹೇಳಲು ಸಾಧ್ಯವಿಲ್ಲ.

## ಔಪಾಧಿಕವಾದರೂ ಅನವಸ್ಥಾ ಇಲ್ಲ.

ಮಂದಾರಮಂಜರೀ–

ननु तस्यानर्थस्यानिमित्तकत्वे स्वरूपानन्दादिवत्स्वाभाविकत्वं स्यात् । सनिमित्तकत्वे च निमित्तस्यापि निमित्तान्तरापेक्षायामनवस्था स्यादित्यत आह – **अनाद्यविद्याकामकर्मेति** ।। सनिमित्तकत्वेऽपि निमित्तस्यानादित्वान्नानवस्थेत्यर्थः ।

**ನನು ತಸ್ಯಾನರ್ಥಸ್ಯ ಅನಿಮಿತ್ತಕತ್ವೇ ಸ್ವರೂಪಾನಂದಾದಿವತ್ ಸ್ವಾಭಾವಿಕತ್ವಂ ಸ್ಯಾತ್ । ಸನಿಮಿತ್ತಕತ್ವೇ ಚ ನಿಮಿತ್ತಸ್ಯಾಪಿ ನಿಮಿತ್ತಾಂತರಾಪೇಕ್ಷಾಯಾಮ್ ಅನವಸ್ಥಾ ಸ್ಯಾದಿತ್ಯತ ಆಹ – ಅನಾದ್ಯವಿದ್ಯಾಕಾಮಕರ್ಮೇತಿ ॥ ಸನಿಮಿತ್ತಕ-ತ್ವೇऽಪಿ ನಿಮಿತ್ತಸ್ಯಾನಾದಿತ್ವಾತ್ ನಾನವಸ್ಥಾ ಇತ್ಯರ್ಥಃ।**

ಪ್ರಶ್ನೆ – ಅನರ್ಥಸ್ವರೂಪವಾದ ದುಃಖಾದಿಗಳು ಅನಿಮಿತ್ತಕವಾಗಿವೆ ಎಂದು ಹೇಳುವುದಾದರೆ ಜೀವಸ್ವರೂಪವೆನಿಸಿದ ಆನಂದಾದಿಗಳಂತೆ ಸ್ವಾಭಾ-ವಿಕವೆಂದೇ ಹೇಳಿದಂತಾಯಿತು. ಆದ್ದರಿಂದ ಅನಿಮಿತ್ತಕವೆಂದು ಹೇಳಲು ಸಾಧ್ಯವಿಲ್ಲ. ಇನ್ನು ಸನಿಮಿತ್ತಕವೆಂದು ಹೇಳಿದರೆ, ಆ ನಿಮಿತ್ತಕ್ಕೆ ಮತ್ತೊಂದು ನಿಮಿತ್ತದ ಅಪೇಕ್ಷೆ ಇರುತ್ತದೆ; ಆ ನಿಮಿತ್ತಕ್ಕೂ ಮತ್ತೊಂದು ನಿಮಿತ್ತದ ಅಪೇಕ್ಷೆ ಇರುವುದರಿಂದ ಅನವಸ್ಥಾದೋಷವು ಬರುತ್ತದೆ. ಹೀಗಿರುವಾಗ ದುಃಖಾದಿ-ಗಳು ಮಿಥ್ಯಾಸ್ವರೂಪವಲ್ಲ; ಕೇವಲ ಔಪಾಧಿಕವಾಗಿವೆ ಎಂಬ ನಿಮ್ಮ ವಾದವು ಹೇಗೆ ಯುಕ್ತವಾಗುತ್ತದೆ?

ಉತ್ತರ – ಈ ಪ್ರಶ್ನೆಗೆ 'ಅನಾದ್ಯವಿದ್ಯಾಕಾಮಕರ್ಮ' ಎಂಬುದರಿಂದ ಉತ್ತರಿಸಿದ್ದಾರೆ. ಅಂದರೆ ದುಃಖಾದ್ಯನರ್ಥಗಳಿಗೆ ಯಾವುದು ನಿಮಿತ್ತವಾಗಿ-ದೆಯೋ ಅದು ಅನಾದಿಯಾಗಿರುವುದರಿಂದ ಅನವಸ್ಥಾದೋಷಕ್ಕೆ ಅವಕಾಶ-ವಿಲ್ಲ. ಅವಿದ್ಯೆ , ಕಾಮ, ಕರ್ಮ ಮೊದಲಾದವುಗಳಿಂದ ದುಃಖವು ಹುಟ್ಟು-

ತ್ತದೆ. ಅವಿದ್ಯೆ, ಕಾಮಾದಿಗಳು ಅನಾದಿಕಾಲದಿಂದಲೂ ಇರುವುದರಿಂದ ಇವುಗಳಿಗೆ ಮತ್ತೊಂದರ ಅಪೇಕ್ಷೆ ಇರುವುದಿಲ್ಲ.

## ಭಾವರೂಪಾಜ್ಞಾನವು ಸ್ವರೂಪತಃ ಅನಾದಿ

ಮಂದಾರಮಂಜರೀ–

**अविद्या** भावरूपाज्ञानम् । **कामो**= रागः । **कर्म**= काम्यादि-कर्म । अविद्यायाः स्वरूपेणानादित्वम्, इतरयोस्तु प्रवाहत इति द्रष्टव्यम् ।

ಅವಿದ್ಯಾ = ಭಾವರೂಪಾಜ್ಞಾನಮ್ । ಕಾಮೋ = ರಾಗಃ । ಕರ್ಮ = ಕಾಮ್ಯಾದಿಕರ್ಮ । ಅವಿದ್ಯಾಯಾಃ ಸ್ವರೂಪೇಣ ಅನಾದಿತ್ವಮ್, ಇತರಯೋಸ್ತು ಪ್ರವಾಹತ ಇತಿ ದ್ರಷ್ಟವ್ಯಮ್ ।

'ಅವಿದ್ಯೆ' ಎಂಬ ಶಬ್ದಕ್ಕೆ ಭಾವರೂಪ ಅಜ್ಞಾನ ಎಂದರ್ಥ. 'ಕಾಮ' ಎಂದರೆ ರಾಗ ಎಂದರ್ಥ. 'ಕರ್ಮ' ಎಂದರೆ ಕಾಮ್ಯಾದಿ ಕರ್ಮಗಳೆಂದರ್ಥ. ಅವಿದ್ಯೆಯು ಸ್ವರೂಪತಃ ಅನಾದಿಯಾಗಿದೆ. ಕಾಮ, ಕರ್ಮಾದಿಗಳು ಪ್ರವಾಹತಃ ಅನಾದಿಯಾಗಿವೆ ಎಂಬ ವ್ಯತ್ಯಾಸವನ್ನು ಗಮನಿಸಬೇಕು.

## ಸ್ವರೂಪತಃ ಅನಾದಿತ್ವದ ಪರಿಷ್ಕಾರ

ಮಂದಾರಮಂಜರೀ–

ननु किमिदमनादित्वं नाम । किं प्रागभावाप्रतियोगित्वम्? किं वा कारणशून्यत्वम्?

ನನು ಕಿಮಿದಮ್ ಅನಾದಿತ್ವಂ ನಾಮ? ಕಿಂ ಪ್ರಾಗಭಾವಾಪ್ರತಿಯೋಗಿತ್ವಮ್? ಕಿಂವಾ ಕಾರಣಶೂನ್ಯತ್ವಮ್?

ಅಜ್ಞಾನವು ಸ್ವರೂಪತಃ ಅನಾದಿಯಾಗಿದೆ; ಕಾಮ್ಯಕರ್ಮಾದಿಗಳೆಲ್ಲವೂ ಪ್ರವಾಹತಃ ಅನಾದಿಯಾಗಿವೆ ಎಂದು ಹೇಳಿದಿರಿ. 'ಸ್ವರೂಪತಃ ಅನಾದಿ' ಎಂದರೆ ಏನು? ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರಬಾರದೆಂದೋ? ಅಥವಾ ತನಗೆ ಯಾವುದೇ ಕಾರಣವಿರುವುದಿಲ್ಲವೆಂದೋ?

## ಸ್ವರೂಪತಃ ಅನಾದಿ ಎಂದರೇನು?

ಮಂದಾರಮಂಜರೀ–

आद्येऽपि किं स्वप्रागभावाप्रतियोगित्वम्? अन्यप्रागभावाप्रतियोगित्वं वा? प्रागभावमात्राप्रतियोगित्वं वा?

ಆದ್ಯೇऽಪಿ ಕಿಂ ಸ್ವಪ್ರಾಗಭಾವಾಪ್ರತಿಯೋಗಿತ್ವಮ್? ಅನ್ಯಪ್ರಾಗಭಾವಾಪ್ರತಿಯೋಗಿತ್ವಂ ವಾ? ಪ್ರಾಗಭಾವಮಾತ್ರಾಪ್ರತಿಯೋಗಿತ್ವಂ ವಾ?

ಮೊದಲನೆಯ ಪಕ್ಷದಲ್ಲಿಯೂ ತನ್ನ ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರುವುದಿಲ್ಲವೆಂದೋ? ಅಥವಾ ಬೇರೆ ಪದಾರ್ಥಗಳ ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರುವುದಿಲ್ಲವೆಂದೋ? ಅಥವಾ ಯಾವುದೇ ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರುವುದಿಲ್ಲವೆಂದೋ?

## ತನ್ನ ಪ್ರಾಗಭಾವಕ್ಕೆ ಅಪ್ರತಿಯೋಗಿಯಾದದ್ದು ಅನಾದಿ ಎನಿಸದು

ಮಂದಾರಮಂಜರೀ–

आद्येऽपि किं स्वप्रागभावः प्रसिद्धः? उत न? आद्ये कथमयं न तत्प्रतियोगी स्यात्? इत्यसम्भवः । द्वितीये त्वसम्भवः । स्वप्रागभावाप्रसिद्धौ तत्प्रतियोगित्वाभावस्य दुर्ज्ञानत्वात् ।

ಆದ್ಯೇऽಪಿ ಕಿಂ ಸ್ವಪ್ರಾಗಭಾವಃ ಪ್ರಸಿದ್ಧಃ ? ಉತ ನ? ಆದ್ಯೇ ಕಥಮಯಂ ನ

ತತ್ಪ್ರತಿಯೋಗೀ ಸ್ಯಾತ್? ಇತ್ಯಸಂಭವಃ । ದ್ವಿತೀಯೇ ತ್ವಸಂಭವಃ । ಸ್ವಪ್ರಾಗ-ಭಾವಾಪ್ರಸಿದ್ಧೌ ತತ್ಪ್ರತಿಯೋಗಿತ್ವಾಭಾವಸ್ಯ ದುರ್ಜ್ಞಾನತ್ವಾತ್ ।

ತನ್ನ ಪ್ರಾಗಭಾವಕ್ಕೆ ಪ್ರತಿಯೋಗಿಯಾಗದಿರುವುದೇ ಸ್ವರೂಪತಃ ಅನಾದಿಯೆಂದು ಹೇಳುವುದಾದರೆ, ತನ್ನ ಪ್ರಾಗಭಾವವು ಪ್ರಸಿದ್ಧವಾಗಿ-ದೆಯೋ? ಅಥವಾ ಅಪ್ರಸಿದ್ಧವಾಗಿದೆಯೋ? ತನ್ನ ಪ್ರಾಗಭಾವವು ಪ್ರಸಿದ್ಧ-ವಾಗಿದೆ ಎನ್ನುವುದಾದರೆ ಪ್ರಾಗಭಾವಾಪ್ರತಿಯೋಗಿತ್ವವು ಬರುವುದಿಲ್ಲವೆಂದು ಅನಾದಿತ್ವದ ಲಕ್ಷಣವೇ ಬಾರದಿರಬೇಕಾದೀತು. ಆದ್ದರಿಂದ ಅಸಂಭವ-ದೋಷವು ಪ್ರಾಪ್ತವಾಗುತ್ತದೆ. ಇನ್ನು ತನ್ನ ಪ್ರಾಗಭಾವವು ಅಪ್ರಸಿದ್ಧವಾಗಿದೆ ಎನ್ನುವುದಾದರೆ, ತನಗೆ ಪ್ರತಿಯೋಗಿ ಯಾದ ಪ್ರಾಗಭಾವವೇ ಅಪ್ರಸಿದ್ಧವಾದ ಮೇಲೆ ಪ್ರಾಗಭಾವಾಪ್ರತಿಯೋಗಿತ್ವಾಭಾವವನ್ನು ತಿಳಿಯಲು ಸಾಧ್ಯವೇ ಇಲ್ಲ.

## ಬೇರೆ ಪ್ರಾಗಭಾವಕ್ಕೆ ಅಪ್ರತಿಯೋಗಿಯಾದದ್ದು ಅನಾದಿ ಎನಿಸದು

ಮಂದಾರಮಂಜರೀ–

नापि द्वितीयः । घटस्यापि पटप्रागभावाप्रतियोगिनोऽनादित्वा-पातात् ।

ನಾಪಿ ದ್ವಿತೀಯಃ । ಘಟಸ್ಯಾಪಿ ಪಟಪ್ರಾಗಭಾವಾಪ್ರತಿಯೋಗಿನೋ-ಽನಾದಿತ್ವಾಪಾತಾತ್ ।

ಬೇರೆ ಪದಾರ್ಥಗಳ ಪ್ರಾಗಭಾವಗಳಿಗೆ ಪ್ರತಿಯೋಗಿಯಾಗದಿರುವಿಕೆ-ಯನ್ನು ಪ್ರಾಗಭಾವಾಪ್ರತಿಯೋಗಿತ್ವ ಎನ್ನುತ್ತೇವೆ ಎಂಬ ಎರಡನೆಯ ಪಕ್ಷವನ್ನು ಹೇಳಬೇಕು. ಆದರೆ ಘಟವೂ ಸಹ ಪಟದ ಪ್ರಾಗಭಾವಕ್ಕೆ ಅಪ್ರತಿಯೋಗಿ-ಯಾಗಿದೆ. ಬೇರೆ ಪದಾರ್ಥದ ಪ್ರಾಗಭಾವಕ್ಕೆ ಅಪ್ರತಿಯೋಗಿಯಾಗಿರುವುದನ್ನೇ ಅನಾದಿ ಎನ್ನುವುದಾದರೆ ಘಟವೂ ಸಹ ಅನಾದಿಯಾಗಬೇಕಾದೀತು.

**ಯಾವುದೇ ಪ್ರಾಗಭಾವಕ್ಕೆ ಅಪ್ರತಿಯೋಗಿಯಾದದ್ದೂ ಅನಾದಿಯಲ್ಲ.**

ಮಂದಾರಮಂಜರೀ–

तृतीयेऽपि मात्रशब्दः किं कार्त्स्न्यवाची? किं वा सामान्यवाची?

**ತೃತೀಯೇऽಪಿ ಮಾತ್ರಶಬ್ದಃ ಕಿಂ ಕಾರ್ತ್ಸ್ನ್ಯವಾಚೀ ? ಕಿಂವಾ ಸಾಮಾನ್ಯ-ವಾಚೀ ?**

ಸಕಲ ಪ್ರಾಗಭಾವಗಳಿಗೆ ಅಪ್ರತಿಯೋಗಿಯಾಗಿರುವಿಕೆಯೇ ಪ್ರಾಗಭಾವಾ-ಪ್ರತಿಯೋಗಿತ್ವವೆಂಬ ಮೂರನೆಯ ಪಕ್ಷವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ 'ಪ್ರಾಗಭಾವಮಾತ್ರಾಪ್ರತಿಯೋಗಿತ್ವಂ' ಎಂಬಲ್ಲಿರುವ 'ಮಾತ್ರ'ಶಬ್ದವು 'ಕೃತ್ಸ್ನ' (ಸಕಲ) ಎಂಬ ಅರ್ಥವನ್ನು ಹೇಳುತ್ತಿದೆಯೋ? ಅಥವಾ 'ಸಾಮಾನ್ಯ' ಎಂಬ ಅರ್ಥವನ್ನು ಹೇಳುತ್ತಿದೆಯೋ? ಎಂದರೆ ಪ್ರಾಗಭಾವವು ಎಲ್ಲೆಡೆ ಸಾಮಾನ್ಯ-ವಾಗಿದೆ ಎಂದೋ?

## ಅನಾದಿತ್ವಲಕ್ಷಣಕ್ಕೆ ಘಟದಲ್ಲಿ ಅತಿವ್ಯಾಪ್ತಿ

ಮಂದಾರಮಂಜರೀ–

नाद्यः । घटस्यापि कृत्स्नप्रागभावाप्रतियोगिनोऽनादित्वापातात् । न हि घटः पटादिप्रागभावप्रतियोगी ।

**ನಾದ್ಯಃ । ಘಟಸ್ಯಾಪಿ ಕೃತ್ಸ್ನಪ್ರಾಗಭಾವಾಪ್ರತಿಯೋಗಿನೋऽನಾದಿತ್ವಾ-ಪಾತಾತ್ । ನ ಹಿ ಘಟಃ ಪಟಾದಿಪ್ರಾಗಭಾವಪ್ರತಿಯೋಗೀ ।**

ಮೊದಲನೆಯ ಪಕ್ಷವು ತಪ್ಪು. 'ಮಾತ್ರ'ಶಬ್ದಕ್ಕೆ ಸಕಲಪ್ರಾಗಭಾವಗಳೆಂಬ 'ಸಾಕಲ್ಯ' (ಕೃತ್ಸ್ನ) ಎಂಬ ಅರ್ಥವನ್ನು ಸ್ವೀಕರಿಸಿದರೆ ಘಟವೂ ಸಹ ಅನಾದಿ-ಯಾಗಬೇಕಾದೀತು. ಏಕೆಂದರೆ ತನ್ನ ಪ್ರಾಗಭಾವಕ್ಕೆ ಮಾತ್ರ ಘಟವು ಪ್ರತಿಯೋಗಿಯಾಗಿದೆಯೇ ಹೊರತು ಸಕಲಪದಾರ್ಥಗಳ ಪ್ರಾಗಭಾವಕ್ಕೆ

ಪ್ರತಿಯೋಗಿಯಾಗಿರುವುದಲ್ಲ. ಈ ದೃಷ್ಟಿಯಿಂದ ಘಟವು ಸಕಲ ಪ್ರಾಗಭಾವ-ಗಳಿಗೆ ಅಪ್ರತಿಯೋಗಿಯಾಗಿರುವುದರಿಂದ ಅನಾದಿತ್ವಲಕ್ಷಣ ಘಟದಲ್ಲಿಯೂ ಬರುತ್ತದೆ.

## ಪ್ರಾಗಭಾವವು ಅನುಗತವಲ್ಲ

ಮಂದಾರಮಂಜರೀ–

न द्वितीयः । आकाशादिपतियोगिकप्रागभावस्याप्रामाणिकत्वात् प्रामाणिकाप्रामाणिकयोः सामान्याभावात् ।

**ನ ದ್ವಿತೀಯಃ । ಆಕಾಶಾದಿಪ್ರತಿಯೋಗಿಕಪ್ರಾಗಭಾವಸ್ಯ ಅಪ್ರಾಮಾಣಿಕ-ತ್ವಾತ್ ಪ್ರಾಮಾಣಿಕಾಪ್ರಾಮಾಣಿಕಯೋಃ ಸಾಮಾನ್ಯಾಭಾವಾತ್ ।**

ಇನ್ನು 'ಕೃತ್ಸ್ನ' ಎಂಬ ಪದಕ್ಕೆ 'ಸಾಮಾನ್ಯ' ಎಂಬ ಅರ್ಥವನ್ನು ಒಪ್ಪಬೇಕು. ಇದೂ ಸಹ ತಪ್ಪು. ಘಟಾದಿಪ್ರತಿಯೋಗಿಕವಾದ ಪ್ರಾಗಭಾವವು ಪ್ರಾಮಾ-ಣಿಕವಾಗಿದೆ. ಆದರೆ ಆಕಾಶಾದಿಪ್ರತಿಯೋಗಿಕವಾದ ಪ್ರಾಗಭಾವವು ಅಪ್ರಾಮಾಣಿಕವಾಗಿದೆ. ಪ್ರಾಮಾಣಿಕವಾದ ಪ್ರಾಗಭಾವ ಹಾಗೂ ಅಪ್ರಾಮಾ-ಣಿಕವಾದ ಪ್ರಾಗಭಾವಗಳಲ್ಲಿ ಅನುಗತವಾದ ಸಾಮಾನ್ಯವನ್ನು ಹೇಳಲು ಸಾಧ್ಯವಿಲ್ಲ. ಗೋವಿಷಾಣ ಹಾಗೂ ಶಶವಿಷಾಣಗಳಲ್ಲಿ ಅನುಗತವಾದ ಸಾಮಾನ್ಯವನ್ನು ಹೇಗೆ ಹೇಳಲು ಸಾಧ್ಯವಿಲ್ಲವೋ ಅದರಂತೆ ಪ್ರಾಗಭಾವತ್ವ-ವನ್ನು ಇಲ್ಲಿ ಹೇಳಲು ಸಾಧ್ಯವಿಲ್ಲ.

## ಅನಾದಿತ್ವ ಎಂದರೆ ಕಾರಣಶೂನ್ಯತ್ವವಲ್ಲ

ಮಂದಾರಮಂಜರೀ–

एवमेव कारणशून्यत्वमिति द्वितीयोऽपि निरसनीयः । तस्माद-विद्यानादित्वं दुर्निरूपमिति ।

ಏವಮೇವ 'ಕಾರಣಶೂನ್ಯತ್ವಮ್' ಇತಿ ದ್ವಿತೀಯೋಽಪಿ ನಿರಸನೀಯಃ । ತಸ್ಮಾತ್ ಅವಿದ್ಯಾನಾದಿತ್ವಂ ದುರ್ನಿರೂಪಮ್ ಇತಿ ।

ಇದರಂತೆ 'ಕಾರಣಶೂನ್ಯತ್ವವನ್ನೇ ಅನಾದಿತ್ವದ ಲಕ್ಷಣ' ಎನ್ನುವ ಎರಡನೆಯ ಪಕ್ಷವನ್ನೂ ಸಹ ನಿರಾಕರಿಸಬೇಕು. ಪ್ರಕೃತ ಕಾರಣಶೂನ್ಯತ್ವವೆಂದರೆ 'ಸ್ವಕಾರಣಾನಿರೂಪಿತಕಾರ್ಯತಾಶೂನ್ಯತ್ವ' ಎಂದೋ? ಅಥವಾ 'ಅನ್ಯಾಕಾರಣನಿರೂಪಿತ ಅಕಾರ್ಯತ್ವ' ಎಂದೋ? 'ಕಾರಣಮಾತ್ರನಿರೂಪಿತ-ಕಾರ್ಯತಾಶೂನ್ಯತ್ವ' ಎಂದೋ? ಹೀಗೆ ವಿಕಲ್ಪಿಸಿ ಕ್ರಮವಾಗಿ ಪ್ರಾಗಭಾವದ ಅಪ್ರಯೋಗಿತ್ವವನ್ನು ನಿರಾಕರಿಸಿದಂತೆ ಇದನ್ನೂ ಸಹ ನಿರಾಕರಿಸಬೇಕು.

ಆದ್ದರಿಂದ ಸ್ವರೂಪತಃ ಅನಾದಿತ್ವದ ಲಕ್ಷಣವನ್ನು 'ಪ್ರಾಗಭಾವಾಪ್ರತಿಯೋಗಿತ್ವಂ' ಎಂದಾಗಲೀ ಅಥವಾ 'ಕಾರಣಶೂನ್ಯತ್ವಂ' ಎಂದಾಗಲೀ ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ಅಜ್ಞಾನ ಮೊದಲಾದವುಗಳನ್ನು ಸ್ವರೂಪತಃ ಅನಾದಿ ಎಂದು ಹೇಗೆ ಹೇಳುತ್ತೀರಿ?

## ಅನಾದಿತ್ವಪರಿಷ್ಕಾರದ ಸಿದ್ಧಾಂತ

ಮಂದಾರಮಂಜರೀ–

अत्रोच्यते –

घटादौ प्रमिता तावत्प्रागभावेन युक्तता ।
आरोप्य बुद्धिपूर्वं सा गगनादौ निषिद्ध्यते ।।

ಅತ್ರೋಚ್ಯತೇ –

ಘಟಾದೌ ಪ್ರಮಿತಾ ತಾವತ್ ಪ್ರಾಗಭಾವೇನ ಯುಕ್ತತಾ ।
ಆರೋಪ್ಯ ಬುದ್ಧಿಪೂರ್ವಂ ಸಾ ಗಗನಾದೌ ನಿಷಿದ್ಧ್ಯತೇ ॥

ಸಮಾಧಾನ – ಘಟಪಟಾದಿಗಳಲ್ಲಿ ಪ್ರಾಗಭಾವಪ್ರತಿಯೋಗಿತ್ವವು ಪ್ರಸಿದ್ಧ-ವಾಗಿದೆ. ಅದನ್ನು ಅನಾದಿಯಾದ ಆಕಾಶ ಮೊದಲಾದವುಗಳಲ್ಲಿ ಬುದ್ಧಿ-ಪೂರ್ವಕವಾಗಿ ಆರೋಪಮಾಡಿ ನಿಷೇಧಿಸುತ್ತೇವೆ.

## ಸ್ವಪ್ರಾಗಭಾವಾಪ್ರತಿಯೋಗಿತ್ವಮ್ ಅನಾದಿತ್ವಮ್

ಮಂದಾರಮಂಜರೀ–

स्वप्रागभावाप्रतियोगित्वमेवानादित्वम् । यत्तु 'स्वप्रागभावाप्रसिद्धौ स्वप्रागभावप्रतियोगित्वाभावोऽप्यसिद्धः' इति तत्र किं प्रतियोगिनोऽसत्वेऽभावोऽपि न स्यात्' इत्यर्थो विवक्षितः ? । किं वा 'प्रतियोगिनोऽसत्वे तज्ज्ञानोपायाभावेन प्रतियोगिमानपूर्वकमभावज्ञानं च न स्यात् इति?

ಸ್ವಪ್ರಾಗಭಾವಾಪ್ರತಿಯೋಗಿತ್ವಮೇವ ಅನಾದಿತ್ವಮ್ । ಯತ್ತು 'ಸ್ವಪ್ರಾಗ-ಭಾವಾಪ್ರಸಿದ್ಧೌ ಸ್ವಪ್ರಾಗಭಾವಪ್ರತಿಯೋಗಿತ್ವಾಭಾವೋಽಪಿ ಅಸಿದ್ಧಃ' ಇತಿ; ತತ್ರ 'ಕಿಂ ಪ್ರತಿಯೋಗಿನೋಽಸತ್ವೇಽಭಾವೋಽಪಿ ನ ಸ್ಯಾತ್' ಇತ್ಯರ್ಥೋ ವಿವಕ್ಷಿತಃ। ಕಿಂ ವಾ 'ಪ್ರತಿಯೋಗಿನೋಽಸತ್ವೇ ತಜ್ಜ್ಞಾನೋಪಾಯಾಭಾವೇನ ಪ್ರತಿಯೋಗಿ-ಮಾನಪೂರ್ವಕಮಭಾವಜ್ಞಾನಂ ಚ ನ ಸ್ಯಾತ್?' ಇತಿ ।

ಸ್ವಪ್ರಾಗಭಾವಾಪ್ರತಿಯೋಗಿತ್ವವನ್ನೇ ಅನಾದಿತ್ವದ ಲಕ್ಷಣವೆಂದು ಹೇಳು-ತ್ತೇವೆ. ಹೀಗೆ ಹೇಳಿದಾಗ ಅನೇಕ ಆಕ್ಷೇಪಗಳನ್ನು ಮಾಡಲಾಗಿತ್ತು. 'ತನ್ನ ಪ್ರಾಗಭಾವವು ಅಪ್ರಸಿದ್ಧವಾದರೆ ಸ್ವಪ್ರಾಗಭಾವಾಪ್ರತಿಯೋಗಿತ್ವವೂ ಸಹ ಅಸಿದ್ಧವೇ ಆಯಿತು' ಎಂಬ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಇಲ್ಲಿ ಆಕ್ಷೇಪ ಮಾಡುವವರ ಅಭಿಪ್ರಾಯವೇನೆಂದು ಮೊದಲು ಸ್ಪಷ್ಟವಾಗಿ ತಿಳಿಯಬೇಕು. ಪ್ರತಿಯೋಗಿಯು ಅಸತ್ ಆದ್ದರಿಂದ ಅಭಾವವೂ ಸಹ ಅಸತ್ ಆಗಿದೆ

ಎಂದೋ? ಅಥವಾ ಪ್ರತಿಯೋಗಿಯು ಅಸತ್ ಆಗಿದ್ದರೆ ಪ್ರತಿಯೋಗಿಯನ್ನು ತಿಳಿಯಲು ಕಾರಣವಿಲ್ಲದ್ದರಿಂದ ಪ್ರತಿಯೋಗಿಜ್ಞಾನಪೂರ್ವಕವಾದ ಅಭಾವ-ಜ್ಞಾನ ಬರುವುದಿಲ್ಲವೆಂದೋ?

## ಲಕ್ಷಣವು ಅತ್ಯಂತಾಭಾವಘಟಿತ

ಮಂದಾರಮಂಜರೀ–

नाद्यः । प्रागभावप्रध्वंसयोः प्रतियोगिसत्त्वेन व्याप्तत्वेऽपि अत्यन्ता-भावस्य तेन व्याप्त्यभावात् । अत्यन्ताभावो हि प्रत्युत प्रतियोगिनोऽ-सत्त्वमेवापेक्षते । प्रकृते च स्वप्रागभावप्रतियोगित्वात्यन्ताभावस्य लक्षण-त्वेन विवक्षितत्वात् ।

ನಾದ್ಯಃ । ಪ್ರಾಗಭಾವಪ್ರಧ್ವಂಸಯೋಃ ಪ್ರತಿಯೋಗಿಸತ್ತ್ವೇನ ವ್ಯಾಪ್ತತ್ವೇಽಪಿ ಅತ್ಯಂತಾಭಾವಸ್ಯ ತೇನ ವ್ಯಾಪ್ತ್ಯಭಾವಾತ್ । ಅತ್ಯಂತಾಭಾವೋ ಹಿ ಪ್ರತ್ಯುತ ಪ್ರತಿಯೋಗಿನೋಽಸತ್ತ್ವಮೇವಾಪೇಕ್ಷ್ಯತೇ । ಪ್ರಕೃತೇ ಚ ಸ್ವಪ್ರಾಗಭಾವಪ್ರತಿ-ಯೋಗಿತ್ವಾತ್ಯಂತಾಭಾವಸ್ಯ ಲಕ್ಷಣತ್ವೇನ ವಿವಕ್ಷಿತತ್ವಾತ್ ।

ಪ್ರತಿಯೋಗಿಯು ಅಸತ್ ಆದ್ದರಿಂದ ಅಭಾವವೂ ಸಹ ಇರುವುದಿಲ್ಲ-ವೆಂಬ ಮೊದಲನೆಯ ಪಕ್ಷ ತಪ್ಪು. ಏಕೆಂದರೆ ಪ್ರಾಗಭಾವ ಮತ್ತು ಪ್ರಧ್ವಂಸ-ಗಳಿಗೆ ಪ್ರತಿಯೋಗಿಸತ್ವದ ಅಪೇಕ್ಷೆ ಇರುತ್ತದೆ. ಎಲ್ಲಿ ಎಲ್ಲಿ ಪ್ರಾಗಭಾವ ಹಾಗೂ ಪ್ರಧ್ವಂಸಗಳು ಇರುತ್ತವೋ ಅಲ್ಲೆಲ್ಲಾ ಪ್ರತಿಯೋಗಿಯು ಇದ್ದೇ ಇರುತ್ತದೆ ಎಂಬ ವ್ಯಾಪ್ತಿಯು ಸಿದ್ಧವಾಗಿದೆ. ಆದರೆ ಎಲ್ಲೆಲ್ಲಿ ಅತ್ಯಂತಾಭಾವವು ಇರುತ್ತದೆಯೋ ಅಲ್ಲಲ್ಲಿ ಪ್ರತಿಯೋಗಿಯು ಇದ್ದೇ ಇರುತ್ತದೆ ಎಂಬ ವ್ಯಾಪ್ತಿಯು ಇರುವುದಿಲ್ಲ. ಹೊರತಾಗಿ ಅತ್ಯಂತಾಭಾವವು ಪ್ರತಿಯೋಗಿಯ ಅಸತ್ವವನ್ನೇ ಅಪೇಕ್ಷಿಸುತ್ತದೆ. ಅಂದರೆ ಮೂರೂ ಕಾಲದಲ್ಲಿಯೂ ಸಹ ಪ್ರತಿಯೋಗಿ ಇಲ್ಲದಿದ್ದರೆ ಅತ್ಯಂತಾ-

ಭಾವವನ್ನು ಹೇಳಲು ಸಾಧ್ಯ. ಪ್ರಕೃತ ನಾವು 'ಸ್ವಪ್ರಾಗಭಾವಪ್ರತಿಯೋಗಿತ್ವಾತ್ಯಂತಾಭಾವ'ವನ್ನೇ ಅನಾದಿತ್ವದ ಲಕ್ಷಣವೆನ್ನುತ್ತಿದ್ದೇವೆ.

## ಬುದ್ಧಿಪೂರ್ವಕಾರೋಪದ ನಿಷೇಧ

ಮಂದಾರಮಂಜರೀ–

न द्वितीयः । घटादौ प्रमितस्य स्वप्रागभावप्रतियोगित्वस्य गगनादौ बुद्धिपूर्वकमारोप्य निषेधात् । निषेधो हि प्रसक्तिपूर्वकः । प्रसक्तिश्च बुद्धिपूर्वकारोप एव ।

ನ ದ್ವಿತೀಯಃ । ಘಟಾದೌ ಪ್ರಮಿತಸ್ಯ ಸ್ವಪ್ರಾಗಭಾವಪ್ರತಿಯೋಗಿತ್ವಸ್ಯ ಗಗನಾದೌ ಬುದ್ಧಿಪೂರ್ವಕಮಾರೋಪ್ಯ ನಿಷೇಧಾತ್ । ನಿಷೇಧೋ ಹಿ ಪ್ರಸಕ್ತಿಪೂರ್ವಕಃ। ಪ್ರಸಕ್ತಿಶ್ಚ ಬುದ್ಧಿಪೂರ್ವಕಾರೋಪ ಏವ।

ಇನ್ನು 'ಪ್ರತಿಯೋಗಿಯು ಅಸತ್ ಆದರೆ ಪ್ರತಿಯೋಗಿಯನ್ನು ತಿಳಿಯಬೇಕಾದ ಕಾರಣವಿಲ್ಲದ ಕಾರಣ ಪ್ರತಿಯೋಗಿಪೂರ್ವಕವಾದ ಅಭಾವದ ಜ್ಞಾನವೂ ಸಹ ಬರುವುದಿಲ್ಲ' ಎಂಬ ಎರಡನೆಯ ಪಕ್ಷವೂ ಸಹ ಅಯುಕ್ತವಾಗಿದೆ. ಏಕೆಂದರೆ ಘಟಾದಿಗಳಲ್ಲಿ ಸ್ವಪ್ರಾಗಭಾವಾಪ್ರತಿಯೋಗಿತ್ವವು ಪ್ರಮಿತವಾಗಿದೆ. ಅಂತಹ ಪ್ರಾಗಭಾವಾಪ್ರತಿಯೋಗಿತ್ವವನ್ನು ಗಗನಾದಿಗಳಲ್ಲಿ ಬುದ್ಧಿಪೂರ್ವಕವಾಗಿ ಆರೋಪ ಮಾಡಿ ನಿಷೇಧ ಮಾಡುತ್ತೇವೆ. ನಿಷೇಧವು ಪ್ರಸಕ್ತಿಪೂರ್ವಕವಾಗಿರುತ್ತದೆ. ಬುದ್ಧಿಪೂರ್ವಕ ಆರೋಪದಲ್ಲಷ್ಟೇ ಪ್ರಸಕ್ತಿ ಇರುತ್ತದೆ.

## ಅಪ್ರಸಕ್ತನಿಷೇಧವಿಲ್ಲ

ಮಂದಾರಮಂಜರೀ–

'इह भूतले घटो नास्ति' इत्यादौ भूतलान्तरे प्रमितस्य घटस्य इह

भूतले बुद्धिपूर्वकमारोप्य निषेधे एतद्भूतलस्य घटाभावः सिद्ध्यति यथा एवमेवात्रापि घटादौ प्रमितस्य स्वप्रागभावप्रतियोगित्वस्य गगनादौ बुद्धिपूर्वकमारोप्य निषेधे गगनस्य स्वप्रागभावप्रतियोगित्वाभावो ज्ञातो भवति ।

**'ಇಹ ಭೂತಲೇ ಘಟೋ ನಾಸ್ತಿ' ಇತ್ಯಾದೌ ಭೂತಲಾಂತರೇ ಪ್ರಮಿತಸ್ಯ ಘಟಸ್ಯ ಇಹ ಭೂತಲೇ ಬುದ್ಧಿಪೂರ್ವಕಮಾರೋಪ್ಯ ನಿಷೇಧೇ ಏತದ್ಭೂತಲಸ್ಯ ಘಟಾಭಾವಃ ಸಿದ್ಧ್ಯತಿ ಯಥಾ ಏವಮೇವಾತ್ರಾಪಿ ಘಟಾದೌ ಪ್ರಮಿತಸ್ಯ ಸ್ವಪ್ರಾಗಭಾವಪ್ರತಿಯೋಗಿತ್ವಸ್ಯ ಗಗನಾದೌ ಬುದ್ಧಿಪೂರ್ವಕಮಾರೋಪ್ಯ ನಿಷೇಧೇ ಗಗನಸ್ಯ ಸ್ವಪ್ರಾಗಭಾವಪ್ರತಿಯೋಗಿತ್ವಾಭಾವೋ ಜ್ಞಾತೋ ಭವತಿ ।**

ಏಕೆಂದರೆ 'ಈ ಭೂತಲದಲ್ಲಿ ಘಟವಿರುವುದಿಲ್ಲ' ಎಂದು ಹೇಳಿದಾಗ ಬೇರೆ ಭೂತಲದಲ್ಲಿ ಪ್ರಮಿತವಾದ ಘಟವುವನ್ನು ಈ ಭೂಮಿಯಲ್ಲಿ ಬುದ್ಧಿಪೂರ್ವಕವಾಗಿ ಆರೋಪ ಮಾಡಿ ನಿಷೇಧ ಮಾಡಲಾಗುತ್ತದೆ. ಆದ್ದರಿಂದ ಈ ಭೂತಲದಲ್ಲಿ ಘಟವಿಲ್ಲವೆಂದು ಸಿದ್ಧವಾಗುತ್ತದೆ. ಅದರಂತೆ ಪ್ರಕೃತ-ದಲ್ಲಿಯೂ ಘಟಪಟಾದಿಗಳಲ್ಲಿ ಪ್ರಮಿತವಾದ ಸ್ವಪ್ರಾಗಭಾವಪ್ರತಿಯೋಗಿ-ತ್ವವನ್ನು ಅನಾದಿಯಾದ ಗಗನಾದಿಪದಾರ್ಥಗಳಲ್ಲಿ ಬುದ್ಧಿಪೂರ್ವಕವಾಗಿ ಆರೋಪಮಾಡಿ ನಿಷೇಧ ಮಾಡಬೇಕು. ಆದ್ದರಿಂದ ಸ್ವಪ್ರಾಗಭಾವಾಪ್ರತಿ-ಯೋಗಿತ್ವಾಭಾವವು ಗಗನಾದಿಗಳಲ್ಲಿ ಇರುತ್ತದೆಂದು ಹೇಳಿದಂತಾಗುತ್ತದೆ. ಆದ್ದರಿಂದ ಅಪ್ರಸಕ್ತವಾದುದನ್ನು ನಿಷೇಧ ಮಾಡಿದಂತಾಗುವುದಿಲ್ಲ.

### ಅನುಮಾನಾಭಾಸದಿಂದ ಪ್ರಸಕ್ತ

ಮಂದಾರಮಂಜರೀ–

अथवा घटादौ स्वप्रागभावप्रतियोगित्वस्य दर्शनात् 'गगनं स्वप्राग-

भावप्रतियोगि वस्तुत्वात् घटवत्' इत्याद्यनुमानाभासैर्गगनादेः स्वप्रागभाव-प्रतियोगित्वे प्रसक्ते तन्निषिद्ध्यत इति नाप्रसक्तप्रतिषेधः ।

ಅಥವಾ ಘಟಾದೌ ಸ್ವಪ್ರಾಗಭಾವಪ್ರತಿಯೋಗಿತ್ವಸ್ಯ ದರ್ಶನಾತ್ 'ಗಗನಂ ಸ್ವಪ್ರಾಗಭಾವಪ್ರತಿಯೋಗಿ ವಸ್ತುತ್ವಾತ್ ಘಟವತ್' ಇತ್ಯಾದಿ ಅನುಮಾನಾ-ಭಾಸೈಃ ಗಗನಾದೇಃ ಸ್ವಪ್ರಾಗಭಾವಪ್ರತಿಯೋಗಿತ್ವೇ ಪ್ರಸಕ್ತೇ ತನ್ನಿಷಿದ್ಧ್ಯತ ಇತಿ ನಾಪ್ರಸಕ್ತಪ್ರತಿಷೇಧಃ।

ಅಥವಾ ಘಟಾದಿಗಳಲ್ಲಿ ಸ್ವಪ್ರಾಗಭಾವಪ್ರತಿಯೋಗಿತ್ವವು ಸಿದ್ಧವಾಗಿದೆ. ಈ ದೃಷ್ಟಾಂತದಿಂದ 'ಗಗನಂ ಸ್ವಪ್ರಾಗಭಾವಪ್ರತಿಯೋಗಿ ವಸ್ತುತ್ವಾತ್ ಘಟವತ್' 'ಘಟವು ಹೇಗೆ ವಸ್ತುವಾಗಿರುವುದರಿಂದ ಸ್ವಪ್ರಾಗಭಾವಪ್ರತಿಯೋಗಿಯಾಗಿ-ದೆಯೋ ಅದರಂತೆ ಗಗನವೂ ವಸ್ತುವಾದ್ದರಿಂದ ಸ್ವಪ್ರಾಗಭಾವಪ್ರತಿಯೋಗಿ-ಯಾಗಿರಬೇಕು' ಎಂಬ ಅನುಮಾನಾಭಾಸದಿಂದ ಗಗನಾದಿಗಳಲ್ಲಿ ಸ್ವಪ್ರಾಗ-ಭಾವಪ್ರತಿಯೋಗಿತ್ವವು ಪ್ರಸಕ್ತವಾಗುತ್ತದೆ. ಗಗನಾದಿಗಳಲ್ಲಿ ಸ್ವಪ್ರಾಗಭಾವ-ಪ್ರತಿಯೋಗಿತ್ವವು ಇಲ್ಲದ ಕಾರಣ ಅದನ್ನು ಅನುಮಾನದಿಂದ ತಿಳಿಯಲು ಸಾಧ್ಯವಿಲ್ಲ. ಹಾಗಾಗಿ ಅನುಮಾನಾಭಾಸದಿಂದ ಅಂದರೆ ದೋಷಯುಕ್ತವಾದ ಅನುಮಾನದಿಂದ ಗಗನವು ತನ್ನ ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿದೆ ಎಂದು ತಿಳಿಯಬಹುದು. ಹೀಗೆ ಬುದ್ಧಿಯಲ್ಲಿ ಗಗನವೂ ತನ್ನ ಪ್ರಾಗಭಾವಕ್ಕೆ ಪ್ರತಿ-ಯೋಗಿಯಾಗಿರುತ್ತದೆಂದು ಪ್ರಸಕ್ತವಾಗುತ್ತದೆ. ಪ್ರಸಕ್ತವಾದ ಸ್ವಪ್ರಾಗಭಾವಾ-ಪ್ರತಿಯೋಗಿತ್ವವನ್ನು ನಿಷೇಧಮಾಡುತ್ತೇವೆ. ಆದ್ದರಿಂದಲೂ ಅಪ್ರಸಕ್ತವಾ-ದುದ್ದನ್ನು ನಿಷೇಧ ಮಾಡಿದಂತಾಗುವುದಿಲ್ಲ.

## ಅನಾದಿತ್ವಪರಿಷ್ಕಾರ ನಾಕುಬಗೆ

ಮಂದಾರಮಂಜರೀ–

एवमेव स्वकारणराहित्यस्वोत्पत्तिराहित्यादीन्यनादित्वलक्षणान्यू-

ह्यानि । एवमेव प्रध्वंसाप्रतियोगित्वं नित्यत्वमित्यादीन्यपि समर्थनीयानीति दिक् ।

ಏವಮೇವ ಸ್ವಕಾರಣರಾಹಿತ್ಯಸ್ವೋತ್ಪತ್ತಿರಾಹಿತ್ಯಾದೀನ್ಯನಾದಿತ್ವಲಕ್ಷಣಾನ್ಯೂಹ್ಯಾನಿ । ಏವಮೇವ ಪ್ರಧ್ವಂಸಾಪ್ರತಿಯೋಗಿತ್ವಂ ನಿತ್ಯತ್ವಮ್ ಇತ್ಯಾದೀನ್ಯಪಿ ಸಮರ್ಥನೀಯಾನೀತಿ ದಿಕ್ ।

ಇದರಂತೆ ಸ್ವಕಾರಣರಾಹಿತ್ಯವನ್ನು, ಉತ್ಪತ್ತಿರಾಹಿತ್ಯವನ್ನು ಅನಾದಿಯ ಲಕ್ಷಣವೆಂದು ಊಹಿಸಿಕೊಳ್ಳಬೇಕು. ಮತ್ತು ಪ್ರಧ್ವಂಸಾಪ್ರತಿಯೋಗಿತ್ವಂ ಮೊದಲಾದ ಲಕ್ಷಣಗಳನ್ನೂ ಸಹ ಸಮರ್ಥಿಸಬೇಕು.

ಒಟ್ಟು ಅನಾದಿತ್ವದ ಪರಿಷ್ಕಾರವನ್ನು ನಾಕು ಬಗೆಯಲ್ಲಿ ಹೇಳಿದಂತಾಯಿತು. (1) ಸ್ವಪ್ರಾಗಭಾವಾಪ್ರತಿಯೋಗಿತ್ವಂ ; (2) ಸ್ವಕಾರಣರಾಹಿತ್ಯಂ ; (3) ಸ್ವ-ಉತ್ಪತ್ತಿರಾಹಿತ್ಯಂ ; (4) ಪ್ರಧ್ವಂಸಾಪ್ರತಿಯೋಗಿತ್ವಂ ಇತ್ಯಾದಿಯಾಗಿ.

## ಸಾರಾಂಶ

ಪರಮಾತ್ಮ, ಜೀವ, ಆಕಾಶ, ಅವಿದ್ಯೆ ಮೊದಲಾದವುಗಳೆಲ್ಲವೂ ಅನಾದಿ-ಪದಾರ್ಥಗಳೆಂದು ನಾವು ಒಪ್ಪುತ್ತೇವೆ. ಪರಮಾತ್ಮ, ಜೀವ ಮೊದಲಾದವರ ಸ್ವರೂಪವೇ ಅನಾದಿಯಾಗಿದೆ ಎಂದರ್ಥ. ಇದನ್ನು 'ಸ್ವರೂಪತಃ ಅನಾದಿ' ಎಂದು ಪಾರಿಭಾಷಿಕಶಬ್ದದಿಂದ ಕರೆಯುತ್ತಾರೆ. ಯಾವುದನ್ನು 'ಸ್ವರೂಪತಃ ಅನಾದಿ' ಎನ್ನಬೇಕು ಎಂದರೆ ಯಾವ ಪದಾರ್ಥಕ್ಕೆ ಮತ್ತೊಂದು ಕಾರಣವಿರುವುದಿಲ್ಲವೋ, ಅಥವಾ ಉತ್ಪತ್ತಿ ಇರುವುದಿಲ್ಲವೋ, ಅಥವಾ ಪ್ರಾಗಭಾವವಿರುವುದಿಲ್ಲವೋ, ಅಥವಾ ಪ್ರಧ್ವಂಸವಿರುವುದಿಲ್ಲವೋ, ಅಥವಾ ಉತ್ಪತ್ತಿ ಧ್ವಂಸ ಇವುಗಳಿಗೆಲ್ಲ ಮತ್ತೊಂದು ಕಾರಣವಿರುವುದಿಲ್ಲವೋ ಅಂತಹ ಪದಾರ್ಥವನ್ನು ಸ್ವರೂಪತಃ ಅನಾದಿ ಎಂದು ತಿಳಿಯಬೇಕು. ಪ್ರಕೃತ ಪ್ರಾಗಭಾವವಿಲ್ಲದಿರುವಿಕೆ ಎಂಬುದನ್ನು ಸ್ವರೂಪತಃ ಅನಾದಿ ಎಂಬುದಾಗಿ ವಿವರವಾಗಿ ತೋರಿಸಿದ್ದಾರೆ.

ಇದರಂತೆ ಉಳಿದವುಗಳನ್ನೂ ಸಹ ನಾವೇ ಸ್ವತಃ ತಿಳಿದುಕೊಳ್ಳಬೇಕು. ಪ್ರಾಗಭಾವ ಇಲ್ಲವೆಂದರೆ ಘಟಪಟಾದಿಗಳಲ್ಲಿ ಪ್ರಾಗಭಾವಪ್ರತಿಯೋಗಿತ್ವವಿರುವುದು ಪ್ರಸಿದ್ಧ-ವಾಗಿದೆ. ಅಂತಹ ಪ್ರಾಗಭಾವಪ್ರತಿಯೋಗಿತ್ವವು ಪರಮಾತ್ಮ, ಜೀವ ಮೊದಲಾದ ಅನಾದಿಪದಾರ್ಥಗಳಲ್ಲಿ ಇರುವುದಿಲ್ಲವೆಂದು ತಿಳಿಯಬೇಕು.

## ವಿದ್ಯಾರ್ಥಿಗಳೇ ಗಮನಿಸಿ

ಆರೋಪ್ಯವಾದದ್ದು ಅತ್ಯಂತಾಸತ್ ಆಗಿರುತ್ತದೆಂದು ನಮ್ಮ ಸಿದ್ಧಾಂತ. ಶುಕ್ತಿ-ಯಲ್ಲಿ ಆರೋಪ್ಯವಾದ ರಜತವು ಮೂರು ಕಾಲದಲ್ಲಿಯೂ ಅತ್ಯಂತ ಅಸತ್ತೇ ಆಗಿರುತ್ತದೆ. ಆದ್ದರಿಂದ ಯಾವ ಪದಾರ್ಥದಲ್ಲಿ ಮತ್ತೊಂದನ್ನು ನಿಷೇಧ ಮಾಡುತ್ತೇವೆಯೋ, ಆ ನಿಷೇಧಪ್ರತಿಯೋಗಿಯು ಅತ್ಯಂತ ಅಸತ್ತೇ ಆಗಬೇಕು. ಪ್ರಕೃತ ಗಗನಾದಿಗಳಲ್ಲಿ ಪ್ರಾಗಭಾವಪ್ರತಿಯೋಗಿತ್ವವನ್ನು ನಿಷೇಧ ಮಾಡುತ್ತಿದ್ದೇವೆ. ಘಟಪಟಾದಿಗಳಲ್ಲಿರುವ ಪ್ರಾಗಭಾವಪ್ರತಿಯೋಗಿತ್ವವು ಪ್ರಾಮಾಣಿಕವಾಗಿದೆ, ಅದನ್ನೇ ಇಲ್ಲಿ ನಿಷೇಧ ಮಾಡುತ್ತಿದ್ದೇವೆ ಎಂದು ಹೇಳು-ವುದಕ್ಕಿಂತ, ಘಟಪಟಾದಿಗಳಲ್ಲಿರುವ ಪ್ರಾಗಭಾವಪ್ರತಿಯೋಗಿತ್ವಕ್ಕೆ ಸದೃಶವಾದ ಮತ್ತೊಂದು ಪ್ರಾಗಭಾವಪ್ರತಿಯೋಗಿತ್ವವನ್ನು ಪ್ರಕೃತ ಗಗನಾದಿಗಳಲ್ಲಿ ನಿಷೇಧ ಮಾಡುತ್ತಿದ್ದೇವೆ ಎಂದು ಹೇಳಬೇಕು. ಹೀಗೆ ಹೇಳಿದಾಗ ನಿಷೇಧಕ್ಕೆ ವಿಷಯವಾದ ಪ್ರಾಗಭಾವತ್ವವನ್ನು ಅತ್ಯಂತ ಅಸತ್ ಎಂದು ಹೇಳಿದಂತಾ-ಗುತ್ತದೆ.

'ಪರಮಾತ್ಮನಲ್ಲಿ ಯಾವುದೇ ದೋಷಗಳು ಇಲ್ಲ' ಎಂದು ವ್ಯವಹರಿಸುತ್ತೇವೆ. ಯಾವ ದೋಷಗಳ ನಿಷೇಧವನ್ನು ಮಾಡುತ್ತಿದ್ದೇವೋ ಆ ನಿಷೇಧಕ್ಕೆ ಪ್ರತಿ-ಯೋಗಿಯಾದ ದೋಷಗಳು ಅತ್ಯಂತ ಅಸತ್ತೇ ಆಗಿವೆ. ಹೊರತಾಗಿ ಜೀವಾದಿ-ಗಳಲ್ಲಿರುವ ದೋಷಗಳ ನಿಷೇಧವನ್ನು ಮಾಡುತ್ತಿರುವುದಲ್ಲ; ಜೀವಾದಿ-ಗಳಲ್ಲಿರುವ ದೋಷಕ್ಕೆ ಸದೃಶವಾದ ಮತ್ತೊಂದು ಅತ್ಯಂತ ಅಸತ್ತಾದ ದೋಷ-ವನ್ನು ಅಂಗೀಕರಿಸಿ ಅದನ್ನು ಬುದ್ಧಿಪೂರ್ವಕವಾಗಿ ಪರಮಾತ್ಮನಲ್ಲಿ ನಿಷೇಧ ಮಾಡಬೇಕು. ಇದನ್ನೇ ಅಪ್ರಾಮಾಣಿಕಪ್ರತಿಯೋಗಿಕನಿಷೇಧ ಎಂದು ಕರೆ-ಯುತ್ತಾರೆ.

ಕೆಲವು ಟಿಪ್ಪಣಿಕಾರರು ವಿಷ್ಣುತತ್ವವಿನಿರ್ಣಯ, ತತ್ತ್ವೋದ್ಯೋತ ಮೊದಲಾದ ಗ್ರಂಥಗಳಲ್ಲಿ ಪ್ರಾಮಾಣಿಕಪ್ರತಿಯೋಗಿಕನಿಷೇಧವನ್ನು ಒಪ್ಪಿದ್ದಾರೆ. ಇನ್ನೂ ಕೆಲವರು ಅಪ್ರಾಮಾಣಿಕಪ್ರತಿಯೋಗಿಕನಿಷೇಧವನ್ನು ಒಪ್ಪಿದ್ದಾರೆ. ವಿದ್ಯಾರ್ಥಿ-ಗಳು ಇದರ ಬಗ್ಗೆ ಇನ್ನೂ ಹೆಚ್ಚಿನ ಚರ್ಚೆಯನ್ನು ತಿಳಿದುಕೊಳ್ಳಬೇಕು.

## ತಿಳಿಯಲೇಬೇಕಾದ ಪ್ರಮೇಯ

"ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾಃ ನಿಖಿಲಾ ಅಪಿ" ಎಂಬುದು ನಮ್ಮ ಸಿದ್ಧಾಂತ. ಅಂದರೆ ಒಂದೇ ಘಟತ್ವವೆಂಬ ಜಾತಿಯು ಸಾವಿರಾರು ಘಟಗಳಲ್ಲಿದೆ ಎಂದು ನಾವು ಒಪ್ಪುವುದಿಲ್ಲ. ಪ್ರತಿಯೊಂದು ಘಟದಲ್ಲಿರುವ ಘಟತ್ವವನ್ನು ಭಿನ್ನಭಿನ್ನವೆಂದು ಒಪ್ಪಿದ್ದೇವೆ. ಅದರಂತೆ ಯಾವ ಪ್ರಾಗಭಾವ-ಪ್ರತಿಯೋಗಿತ್ವವು ಘಟದಲ್ಲಿದೆಯೋ ಅದೇ ಗಗನಾದಿಗಳಲ್ಲಿ ಇದೆ ಎಂದು ಹೇಳಲು ಸಾಧ್ಯವಿಲ್ಲ. ಘಟದಲ್ಲಿರುವ ಪ್ರಾಗಭಾವಪ್ರತಿಯೋಗಿತ್ವವೇ ಬೇರೆ. ಪಟದಲ್ಲಿರುವ ಪ್ರಾಗಭಾವಪ್ರತಿಯೋಗಿತ್ವವೇ ಬೇರೆ. ಇಂತಹ ಪ್ರಾಗಭಾವಪ್ರತಿಯೋಗಿತ್ವಕ್ಕೆ ಸದೃಶವಾದ ಮತ್ತೊಂದು ಪ್ರಾಗಭಾವಪ್ರತಿ-ಯೋಗಿತ್ವವನ್ನು ಒಪ್ಪಿ ಅದರ ನಿಷೇಧವನ್ನು ಗಗನಾದಿಗಳಲ್ಲಿ ಮಾಡಬೇಕಾ-ಗುತ್ತದೆ. ನಿಷೇಧಕ್ಕೆ ವಿಷಯವಾದ ಪ್ರಾಗಭಾವಪ್ರತಿಯೋಗಿತ್ವವು ಅತ್ಯಂತಾಸತ್ ಎಂದು ಒಪ್ಪುವುದು ಅನಿವಾರ್ಯ. ಅಪ್ರಾಮಾಣಿಕ-ಪ್ರತಿಯೋಗಿತ್ವವನ್ನು ಒಪ್ಪುವುದು ಈ ದೃಷ್ಟಿಯಿಂದ ಅನಿವಾರ್ಯ. ಇನ್ನೂ ಹೆಚ್ಚಿನ ವಿಷಯವನ್ನು ವಿದ್ವದ್ಗೋಷ್ಠಿಗಳಲ್ಲಿ ಭಾಗವಹಿಸಿ ತಿಳಿಯಿರಿ.

* * * * *

## ಪ್ರವಾಹತಃ ಅನಾದಿತ್ವಪರಿಷ್ಕಾರದ ಆಕ್ಷೇಪ

ಮಂದಾರಮಂಜರೀ–

नन्वथापि प्रवाहतोऽनादित्वमिति कोऽर्थः? प्रवाहोऽनादिरित्यर्थ इति चेत् । स किं प्रवाहिभ्यो भिद्यते? उत न? आद्येऽपि स किं प्रवाहिभिरारभ्यते? उत ज्ञाप्यते?

ನನ್ವಥಾಪಿ ಪ್ರವಾಹತೋऽನಾದಿತ್ವಮಿತಿ ಕೋऽರ್ಥಃ? ಪ್ರವಾಹತೋऽನಾದಿರಿತ್ಯರ್ಥ ಇತಿ ಚೇತ್, ಸ ಕಿಂ ಪ್ರವಾಹಿಭ್ಯೋ ಭಿದ್ಯತೇ? ಉತ ನ? ಆದ್ಯೇಪಿ ಸ ಕಿಂ ಪ್ರವಾಹಿಭಿರಾರಭ್ಯತೇ? ಉತ ಜ್ಞಾಪ್ಯತೇ?

ಕಾಮ, ಕರ್ಮ ಮೊದಲಾದವುಗಳು ಪ್ರವಾಹತಃ ಅನಾದಿಯಾಗಿವೆ ಎಂದು ಹೇಳಿದಿರಿ. ಇದೂ ಸಹ ತಪ್ಪು. 'ಪ್ರವಾಹತಃ ಅನಾದಿ' ಎಂಬುದಕ್ಕೆ ಏನರ್ಥ? ಪ್ರವಾಹದ ಪರಂಪರೆಯು ಅನಾದಿಯಾಗಿದೆಯೆಂದು ಹೇಳಬೇಕು. ಆದರೆ ಆ ಪ್ರವಾಹವು ಪ್ರವಾಹಿಗಳಿಗಿಂತ ಭಿನ್ನವೋ ಅಥವಾ ಅಭಿನ್ನವೋ? ಭಿನ್ನವೆಂದರೆ ಪ್ರವಾಹಿಗಳ ದೆಸೆಯಿಂದ ಹುಟ್ಟುತ್ತಿದೆಯೋ? ಅಥವಾ ಕೇವಲ ತಿಳಿಯುತ್ತದೆಯೋ?

## ಪ್ರವಾಹಜನ್ಯವೆಂದರೆ ಅನಾದಿಯಾಗದು

ಮಂದಾರಮಂಜರೀ–

आद्ये कथमयमनादिः स्यात्?

ಆದ್ಯೇ ಕಥಮಯಮ್ ಅನಾದಿಃ ಸ್ಯಾತ್?

ಪ್ರವಾಹವು ಪ್ರವಾಹಿಗಳಿಂದ ಹುಟ್ಟುತ್ತಿದೆ ಮತ್ತು ಭಿನ್ನವಾಗಿದೆ ಎಂದು ಹೇಳುವುದಾದರೆ ಪ್ರವಾಹವನ್ನು ಅನಾದಿ ಎಂದು ಹೇಳಲು ಹೇಗೆ ಸಾಧ್ಯ? ಏಕೆಂದರೆ ಪ್ರವಾಹಿಗಳಿಂದ ಹುಟ್ಟಿದ ಮೇಲೆ ಸಾದಿಯೇ ಆಗಬೇಕು.

## ಜ್ಞಾಪ್ಯವೆಂದರೆ ಅತಿಪ್ರಸಂಗ, ಅಸಂಭವ

ಮಂದಾರಮಂಜರೀ–

द्वितीयेऽपि किं प्रवाहिणां प्रत्येकं ज्ञापकत्वम्? किं वा मिलितानाम्? नाद्यः। एकैकप्रवाहिदर्शनेऽपि प्रवाहबुद्धिप्रसङ्गात्। न द्वितीयः। तेषां क्रमभाविनां मेलनस्यैवासम्भवात्।

ದ್ವಿತೀಯೇಽಪಿ ಕಿಂ ಪ್ರವಾಹಿಣಾಂ ಪ್ರತ್ಯೇಕಂ ಜ್ಞಾಪಕತ್ವಮ್? ಕಿಂ ವಾ ಮಿಲಿತಾನಾಮ್? ನಾದ್ಯಃ। ಏಕೈಕಪ್ರವಾಹಿದರ್ಶನೇಽಪಿ ಪ್ರವಾಹಬುದ್ಧಿಪ್ರಸಂಗಾತ್। ನ ದ್ವಿತೀಯಃ। ತೇಷಾಂ ಕ್ರಮಭಾವಿನಾಂ ಮೇಲನಸ್ಯೈವಾಸಂಭವಾತ್।

ಪ್ರವಾಹವನ್ನು ಪ್ರವಾಹಿಗಳು ಕೇವಲ ತಿಳಿಸುತ್ತವೆ ಎಂದರೆ ಪ್ರತ್ಯೇಕವಾಗಿ ಒಂದೊಂದು ಪ್ರವಾಹಗಳನ್ನು ತಿಳಿಸುತ್ತವೆಯೋ? ಅಥವಾ ಮಿಲಿತವಾದ ಸಕಲಪ್ರವಾಹಿಗಳು ಪ್ರವಾಹವನ್ನು ತಿಳಿಸುತ್ತವೆಯೋ? ಮೊದಲನೆಯ ಪಕ್ಷ ಸರಿಯಲ್ಲ. ಏಕೆಂದರೆ ಒಂದೊಂದೇ ಪ್ರವಾಹಿಗಳ ಜ್ಞಾನವು ಬರುತ್ತಿದ್ದರೂ ಪ್ರವಾಹದ ಬುದ್ಧಿಯು ಬರುತ್ತಿಲ್ಲ. ಪ್ರಕೃತ ನಿಮ್ಮ ಪ್ರಕಾರ ಒಂದೊಂದೇ ಪ್ರವಾಹಿಯ ಜ್ಞಾನದಿಂದಲೂ ಪ್ರವಾಹದ ಬುದ್ಧಿಯು ಬರಬೇಕಾದೀತು. ಇನ್ನು ಸಕಲ ಪ್ರವಾಹಿಗಳು ಸೇರಿ ಪ್ರವಾಹದ ಬುದ್ಧಿಯನ್ನು ಹುಟ್ಟಿಸುತ್ತವೆ ಎನ್ನಬೇಕು. ಆದರೆ ಕ್ರಮಭಾವಿಯಾದ ಪ್ರವಾಹಿಗಳಿಗೆ ಮೇಲನವೇ ಯುಕ್ತವಾಗುವುದಿಲ್ಲ.

## ಪ್ರವಾಹಿಯೇ ಪ್ರವಾಹವೆಂದರೆ ಜನ್ಯವಾಗಲಿ

ಮಂದಾರಮಂಜರೀ–

नाऽपि द्वितीयः। सादिप्रवाह्यभिन्नस्य प्रवाहस्यानादित्वायोगात्। तस्मात्कर्मादीनां प्रवाहतोऽनादित्वमिति व्याख्यानमयुक्तमिति।

ನಾಽಪಿ ದ್ವಿತೀಯಃ । ಸಾದಿಪ್ರವಾಹ್ಯಭಿನ್ನಸ್ಯ ಪ್ರವಾಹಸ್ಯಾನಾದಿತ್ವಾ-ಯೋಗಾತ್ । ತಸ್ಮಾತ್ ಕರ್ಮಾದೀನಾಂ ಪ್ರವಾಹತೋಽನಾದಿತ್ವಮ್ ಇತಿ ವ್ಯಾಖ್ಯಾನಮಯುಕ್ತಮಿತಿ।

ಪ್ರವಾಹವು ಪ್ರವಾಹಿಗಳಿಗಿಂತ ಭಿನ್ನವಲ್ಲವೆಂಬ ಎರಡನೆಯ ಪಕ್ಷವೂ ಸರಿಯಲ್ಲ. ಏಕೆಂದರೆ ಪ್ರವಾಹಿಗಳೆಲ್ಲವೂ ಉತ್ಪತ್ತಿಯುಳ್ಳವುಗಳಾಗಿವೆ. ಇಂತಹ ಪ್ರವಾಹಿಗಳಿಂದ ಅಭಿನ್ನವಾದ ಪ್ರವಾಹಗಳೂ ಸಹ ಉತ್ಪನ್ನಗಳಾಗುತ್ತವೆ ಹೊರತು ಅನಾದಿಯಾಗುವುದಿಲ್ಲ. ಆದ್ದರಿಂದ ಕಾಮ, ಕರ್ಮಾದಿಗಳು ಪ್ರವಾಹತಃ ಅನಾದಿಯಾಗಿವೆ ಎಂದು ಹೇಳಿದ್ದು ಅಯುಕ್ತವೇ ಆಗಿದೆ.

## ಪ್ರವಾಹತಃ ಅನಾದಿತ್ವಪರಿಷ್ಕಾರದ ಸಿದ್ಧಾಂತ

ಮಂದಾರಮಂಜರೀ–

अत्रोच्यते –

प्रवाह इति गीयन्ते सजातीयाः प्रवाहिणः ।
कालेनोपाधिना ग्रस्ता नानावृक्षा वनं यथा ।।

ಅತ್ರೋಚ್ಯತೇ –

ಪ್ರವಾಹ ಇತಿ ಗೀಯಂತೇ ಸಜಾತೀಯಾಃ ಪ್ರವಾಹಿಣಃ।
ಕಾಲೇನೋಪಾಧಿನಾ ಗ್ರಸ್ತಾ ನಾನಾವೃಕ್ಷಾ ವನಂ ಯಥಾ ॥

ಹೀಗೆ ಉತ್ತರಿಸುತ್ತೇವೆ –

ಅನೇಕ ವೃಕ್ಷಗಳು ಒಂದು ಪ್ರದೇಶದಲ್ಲಿದ್ದಾಗ ವನವೆಂದು ಹೇಗೆ ಕರೆ-ಯುತ್ತಾರೋ, ಅದರಂತೆ ಸಜಾತೀಯವಾದ ಅನೇಕಪ್ರವಾಹಿಗಳು ಕಾಲವೆಂಬ ಉಪಾಧಿಯಿಂದ ಪ್ರವಾಹವೆಂದು ಕರೆಸಿಕೊಳ್ಳುತ್ತವೆ.

## ಪ್ರವಾಹಿಯೇ ಪ್ರವಾಹ

ಮಂದಾರಮಂಜರೀ–

न प्रवाहिभ्योऽतिरिक्तः प्रवाहोऽस्ति । सजातीयानां प्रवाहिणामेव पूर्वापरकालवृत्तित्वेनोपाधिना प्रवाहशब्दार्थत्वात् । दृष्टं चैतत् । एकदेशस्थत्वेनोपाधिना अनेकवृक्षाणामेव वनशब्दार्थत्वात् ।

ನ ಪ್ರವಾಹಿಭ್ಯೋಽತಿರಿಕ್ತಃ ಪ್ರವಾಹೋಽಸ್ತಿ । ಸಜಾತೀಯಾನಾಂ ಪ್ರವಾಹಿಣಾಮೇವ ಪೂರ್ವಾಪರಕಾಲವೃತ್ತಿತ್ವೇನೋಪಾಧಿನಾ ಪ್ರವಾಹಶಬ್ದಾರ್ಥತ್ವಾತ್ । ದೃಷ್ಟಂ ಚೈತತ್ । ಏಕದೇಶಸ್ಥೇನೋಪಾಧಿನಾ ಅನೇಕವೃಕ್ಷಾಣಾಮೇವ ವನಶಬ್ದಾರ್ಥತ್ವಾತ್ ।

ಪ್ರವಾಹವು ಪ್ರವಾಹಿಗಳಿಂದ ಅತಿರಿಕ್ತವೆಂದು ನಾವು ಹೇಳುವುದಿಲ್ಲ. ಹೊರತಾಗಿ ಸಜಾತೀಯವಾದ ಅನೇಕ ಪ್ರವಾಹಿಗಳು ಪೂರ್ವಾಪರಕಾಲವೃತ್ತಿತ್ವವೆಂಬ ಉಪಾಧಿಯಿಂದ ಪ್ರವಾಹ ಎಂದು ಕರೆಸಿಕೊಳ್ಳುತ್ತವೆ. ಈ ವಿಷಯದಲ್ಲಿ ದೃಷ್ಟಾಂತವು ಕಂಡಿದೆ – ಅನೇಕ ಮರಗಳೇ ಏಕದೇಶಸ್ಥತ್ವವೆಂಬ ಉಪಾಧಿಯಿಂದ 'ವನ' ಎಂದು ಕರೆಸಿಕೊಳ್ಳುತ್ತವೆ. ಅದರಂತೆ ಪ್ರವಾಹಿಗಳೇ ಪ್ರವಾಹ ಎಂದು ಕರೆಸಿಕೊಳ್ಳುತ್ತವೆ ಎಂದು ಹೇಳಬೇಕು.

## ಪರಿಷ್ಕೃತಲಕ್ಷಣ

ಮಂದಾರಮಂಜರೀ–

तेषामनादित्वं च एकप्रवाहमध्यपतितानेकप्रवाहिप्रतियोगिकप्रागभावावच्छिन्नकालावृत्तित्वानधिकरणध्वंसप्रतियोगिप्रवाहित्वमिति न कश्चिद्दोषः ।

ತೇಷಾಮನಾದಿತ್ವಂ ಚ ಏಕಪ್ರವಾಹಮಧ್ಯಪತಿತಾನೇಕಪ್ರವಾಹಿಪ್ರತಿಯೋಗಿಕಪ್ರಾಗಭಾವಾವಚ್ಛಿನ್ನಕಾಲಾವೃತ್ತಿತ್ವಾನಧಿಕರಣಧ್ವಂಸಪ್ರತಿಯೋಗಿಪ್ರವಾಹಿತ್ವಮಿತಿ ನ ಕಶ್ಚಿದ್ದೋಷಃ।

ಪ್ರವಾಹವನ್ನು ಪ್ರವಾಹಿಗಳಿಂದ ಅಭಿನ್ನವೆಂದು ಹೇಳುವುದಾದರೆ, ಉತ್ಪತ್ತಿಯುಳ್ಳ ಪ್ರವಾಹಿಗಳಂತೆ ಪ್ರವಾಹಗಳಿಗೂ ಉತ್ಪತ್ತಿಯನ್ನು ಹೇಳಿದಂತಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಪ್ರವಾಹತಃ ಅನಾದಿತ್ವದ ಪರಿಷ್ಕಾರವನ್ನು ಹೀಗೆ ಮಾಡುತ್ತೇವೆ – 'ಏಕಪ್ರವಾಹಮಧ್ಯಪತಿತಾನೇಕಪ್ರವಾಹಿಪ್ರತಿಯೋಗಿಕಪ್ರಾಗಭಾವಾವಚ್ಛಿನ್ನಕಾಲಾವೃತ್ತಿತ್ವಾನಧಿಕರಣಧ್ವಂಸಪ್ರತಿಯೋಗಿಪ್ರವಾಹಿತ್ವಮ್' ಒಂದು ಪ್ರವಾಹದ ಮಧ್ಯದಲ್ಲಿ ಅನೇಕ ಪ್ರವಾಹಿಗಳಿರುತ್ತವೆ. ಯಾವ ಕಾಲದಲ್ಲಿ ಯಾವ ಪ್ರವಾಹಿಪ್ರತಿಯೋಗಿಕವಾದ ಪ್ರಾಗಭಾವವು ಇರುತ್ತದೋ, ಅದೇ ಕಾಲದಲ್ಲಿ ಮತ್ತೊಂದು ಪ್ರವಾಹದ ಧ್ವಂಸಪ್ರತಿಯೋಗಿತ್ವವು ಪ್ರವಾಹಿಯಲ್ಲಿ ಇರುತ್ತದೆ. ಆದ್ದರಿಂದ ಒಂದು ಪ್ರವಾಹಿಯ ಧ್ವಂಸವಾದರೆ ಮತ್ತೊಂದು ಪ್ರವಾಹಿಯ ಪ್ರಾಗಭಾವವಿರುತ್ತದೆ. ಆದ್ದರಿಂದ ಏಕಪ್ರವಾಹಮಧ್ಯಪತಿತವಾದ ಅನೇಕಪ್ರವಾಹಿಪ್ರತಿಯೋಗಿಕವಾದ ಪ್ರಾಗಭಾವಾವಚ್ಛಿನ್ನವಾದ ಕಾಲದಲ್ಲಿ ಇರುವಂತಹ ಧ್ವಂಸಪ್ರತಿಯೋಗಿಪ್ರವಾಹಿತ್ವವನ್ನೇ ಪ್ರವಾಹತಃ ಅನಾದಿತ್ವವೆಂದು ಕರೆಯುತ್ತೇವೆ. ಆದ್ದರಿಂದ ಯಾವುದೇ ದೋಷಗಳು ಇರುವುದಿಲ್ಲ.

**ಸಾರಾಂಶ –**

ಕಾಮ, ಕರ್ಮ, ಕ್ಷಣ ಮೊದಲಾದವುಗಳನ್ನು ಪ್ರವಾಹತಃ ಅನಾದಿ ಎಂದು ಕರೆಯುತ್ತೇವೆ. ಇವುಗಳಿಗೆ ಸ್ವರೂಪತಃ ನಾಶವಿದ್ದರೂ, ಪುನಃ ಪುನಃ ಹುಟ್ಟುತ್ತಲೇ ಇರುವುದರಿಂದ ಪ್ರವಾಹತಃ ಅನಾದಿ ಎಂದು ಕರೆಸಿಕೊಳ್ಳುತ್ತವೆ. ಮೊದಲು ತಿನ್ನುವ ಆಸೆಯು ಬರುತ್ತದೆ, ಅನಂತರ ಆಡುವ ಆಸೆಯು ಹುಟ್ಟುತ್ತದೆ, ಅನಂತರ ಮಲಗುವ ಆಸೆಯು ಹುಟ್ಟಿರುತ್ತದೆ. ಇದರಂತೆ ಕರ್ಮವೂ ಸಹ ಪ್ರತಿಕ್ಷಣದಲ್ಲಿ

ಹುಟ್ಟುತ್ತಲೇ ಇರುತ್ತದೆ. ಈ ಕಾರಣದಿಂದ ಇದನ್ನು ಅನಾದಿ ಎಂದು ಕರೆಯ-ಬೇಕು.

## ಪ್ರಕರಣಗ್ರಂಥಕ್ಕೆ ಪ್ರಯೋಜನಾದಿಗಳ ಸಮರ್ಥನೆ

ಮಂದಾರಮಂಜರೀ–

ननु जीवस्वरूपानन्दस्य स्वतः सिद्धत्वात् तद्विरुद्धदुःखस्य तत्रानवकाशान्नेश्वरप्रसादेन सम्पाद्यमस्तीत्यत आह – **स्वतश्चिदिति** ।।

ನನು ಜೀವಸ್ವರೂಪಾನಂದಸ್ಯ ಸ್ವತಃ ಸಿದ್ಧತ್ವಾತ್ ತದ್ವಿರುದ್ಧದುಃಖಸ್ಯ ತತ್ರಾನವಕಾಶಾತ್ ನ ಈಶ್ವರಪ್ರಸಾದೇನ ಸಂಪಾದ್ಯಮಸ್ತೀತ್ಯತ ಆಹ – ಸ್ವತ-ಶ್ಚಿದಿತಿ ॥

ಪ್ರಶ್ನೆ –ಆನಂದವು ಜೀವನ ಸ್ವರೂಪವಾಗಿರುವುದರಿಂದ ಸ್ವಾಭಾವಿಕ-ವಾಗಿಯೇ ಇರುತ್ತದೆ. ಇದಕ್ಕೆ ವಿರುದ್ಧವಾದ ದುಃಖವು ಇರಲು ಸಾಧ್ಯವೇ ಇಲ್ಲ. ಆದ್ದರಿಂದ ಈಶ್ವರಪ್ರಸಾದದಿಂದ ದುಃಖದ ನಿವೃತ್ತಿಯನ್ನು ಸಂಪಾದಿಸ-ಬೇಕೆಂದು ಹೇಳುವುದು ತಪ್ಪಲ್ಲವೇ?

ಉತ್ತರ – ಈ ಪ್ರಶ್ನೆಗೆ 'ಸ್ವತಃ ಚಿದಾನಂದಾದ್ಯಾತ್ಮಕಸ್ಯ' ಇತ್ಯಾದಿ ವಾಕ್ಯ-ಗಳಿಂದ ಉತ್ತರಿಸುತ್ತಿದ್ದಾರೆ.

## ಈಶ್ವರನ ಪ್ರಸಾದ ಬೇಕೇ ಬೇಕು

ಮಂದಾರಮಂಜರೀ–

चिदानन्दाद्यात्मकस्यापि नापगच्छतीति विधेयविशेषणमेतत् । स्वरूपानन्दादिना बाह्यदुःखादेर्विरोधाभावात् दुःखादिनिवृत्तेरीश्वरप्रसाद-साध्यत्वमित्यर्थः ।

**ಚಿದಾನಂದಾದ್ಯಾತ್ಮಕಸ್ಯಾಪಿ ನಾಪಗಚ್ಛತೀತಿ ವಿಧೇಯವಿಶೇಷಣಮೇತತ್ । ಸ್ವರೂಪಾನಂದಾದಿನಾ ಬಾಹ್ಯದುಃಖಾದೇರ್ವಿರೋಧಾಭಾವಾತ್ ದುಃಖಾದಿನಿವೃತ್ತೇರೀಶ್ವರಪ್ರಸಾದಸಾಧ್ಯತ್ವಮಿತ್ಯರ್ಥಃ ।**

ಜೀವನು ಚಿದಾನಂದಾತ್ಮಕನಾಗಿದ್ದರೂ ದುಃಖವು ಪರಿಹಾರವಾಗಿರುವುದಿಲ್ಲ ಎಂಬುದಾಗಿ 'ಚಿದಾನಂದಾದ್ಯಾತ್ಮಕಸ್ಯಾಪಿ' ಎಂಬ ಪದಕ್ಕೆ 'ನಾಪಗಚ್ಛತಿ' ಎಂಬಲ್ಲಿ ಅನ್ವಯ ಮಾಡಬೇಕು. ಸ್ವರೂಪಭೂತವಾದ ಆನಂದಕ್ಕೂ ಬಾಹ್ಯವಾದ ದುಃಖಕ್ಕೂ ಪರಸ್ಪರವಿರೋಧವಿರುವುದಿಲ್ಲ. ಆತ್ಮಸ್ವರೂಪದಲ್ಲಿ ಆನಂದವಿದ್ದರೂ ಬಾಹ್ಯವಾದ ದುಃಖದ ಅನುಭವವು ಆಗುತ್ತಿರುತ್ತದೆ. ಅದರ ನಿವೃತ್ತಿಗಾಗಿ ಈಶ್ವರನ ಪ್ರಸಾದವನ್ನು ಅಪೇಕ್ಷಿಸಬೇಕಾಗುತ್ತದೆ. ಆದ್ದರಿಂದ ದುಃಖಾದಿಗಳ ನಿವೃತ್ತಿಗೆ ಈಶ್ವರಪ್ರಸಾದದ ಅಪೇಕ್ಷೆ ಇರುತ್ತದೆಂದು ತಿಳಿಯಬೇಕು.

## ಇರುವುದನ್ನು ಅನುಭವಿಸಲೂ ಈಶ್ವರಪ್ರಸಾದ ಬೇಕು

ಮಂದಾರಮಂಜರೀ–

उपलक्षणमेतत् । स्वरूपानन्दस्य नित्यत्वेऽपि आविर्भूतानन्दस्य प्रयोजनत्वात् आविर्भावस्येश्वरप्रसादसाध्यत्वादित्यापि द्रष्टव्यम् ।

**ಉಪಲಕ್ಷಣಮೇತತ್ । ಸ್ವರೂಪಾನಂದಸ್ಯ ನಿತ್ಯತ್ವೇಽಪಿ ಆವಿರ್ಭೂತಾನಂದಸ್ಯ ಪ್ರಯೋಜನತ್ವಾತ್ ಆವಿರ್ಭಾವಸ್ಯ ಈಶ್ವರಪ್ರಸಾದಸಾಧ್ಯತ್ವಾತ್ ಇತ್ಯಪಿ ದ್ರಷ್ಟವ್ಯಮ್ ।**

ಉಪಲಕ್ಷಣಯಾ ಮತ್ತೊಂದು ವಿಷಯವನ್ನು ತಿಳಿಯಬೇಕು – ಸ್ವರೂಪಭೂತವಾದ ಆನಂದವು ನಿತ್ಯವಾಗಿ ಆತ್ಮನಲ್ಲಿದ್ದರೂ ಅಜ್ಞಾನದಿಂದ ಸ್ವರೂಪಾನಂದವನ್ನು ಅನುಭವಿಸಲು ನಮ್ಮಿಂದ ಆಗುತ್ತಿಲ್ಲ. ಅಂತಹ ಸ್ವರೂಪಸುಖದ

ಆವಿರ್ಭಾವಕ್ಕೋಸ್ಕರ ಭಗವಂತನ ಪ್ರಸಾದವನ್ನು ಅಪೇಕ್ಷಿಸಬೇಕು. ಆವಿರ್ಭಾವಗೊಂಡ ಆನಂದವಷ್ಟೇ ಸುಖದಾಯಕವಾಗಿರುತ್ತದೆ. ಬಾಹ್ಯದುಃಖದ ನಿವೃತ್ತಿಗಾಗಿ ಮತ್ತು ಸ್ವರೂಪಭೂತವಾದ ಸುಖದ ಆವಿರ್ಭಾವಕ್ಕಾಗಿ ಈಶ್ವರನ ಪ್ರಸಾದವನ್ನು ಅಪೇಕ್ಷಿಸಬೇಕೆಂದು ತಿಳಿಯಬೇಕು.

## ಅನರ್ಥ ಜೀವನಿಗೆ ಮಾತ್ರ , ಈಶನಿಗಿಲ್ಲ

ಮಂದಾರಮಂಜರೀ–

परमात्माभिन्नस्य जीवस्य कुतोऽनर्थप्राप्तिः? इत्यत आह– **परमात्मनो भिन्नस्येति** ।। व्यावहारिकभेदसद्भावेऽपि न पारमार्थिकानर्थो जीवस्य सम्भवतीत्यत आह – **अत्यन्तेति** ।। परमार्थत इत्यर्थः ।

ಪರಮಾತ್ಮಾಭಿನ್ನಸ್ಯ ಜೀವಸ್ಯ ಕುತೋಽನರ್ಥಪ್ರಾಪ್ತಿಃ? ಇತ್ಯತ ಆಹ - ಪರಮಾತ್ಮನೋ ಭಿನ್ನಸ್ಯೇತಿ ॥ ವ್ಯಾವಹಾರಿಕಭೇದಸದ್ಭಾವೇಽಪಿ ನ ಪಾರಮಾರ್ಥಿಕಾನರ್ಥೋ ಜೀವಸ್ಯ ಸಂಭವತೀತ್ಯತ ಆಹ – ಅತ್ಯಂತೇತಿ ॥ ಪರಮಾರ್ಥತ ಇತ್ಯರ್ಥಃ।

ಪ್ರಶ್ನೆ– ಜೀವನು ಪರಮಾತ್ಮನಿಗಿಂತ ಅಭಿನ್ನನೇ ಆಗಿದ್ದಾನೆ, ಇಂತಹ ಜೀವನಿಗೆ ಅನರ್ಥವಾದರೂ ಹೇಗೆ ಪ್ರಾಪ್ತವಾಗುತ್ತದೆ?

ಉತ್ತರ – 'ಪರಮಾತ್ಮನೋ ಭಿನ್ನಸ್ಯ' ಎಂಬ ವಾಕ್ಯದಿಂದ ಇದಕ್ಕೆ ಉತ್ತರಿಸಿದ್ದಾರೆ. ಜೀವನು ಪರಮಾತ್ಮನಿಗಿಂತ ಭಿನ್ನನೇ ಆಗಿರುವುದರಿಂದ ಪರಮಾತ್ಮನಿಗೆ ಇಲ್ಲದ ಅನರ್ಥವು ಜೀವನಿಗೆ ಉಂಟಾಗುತ್ತದೆ.

ಪ್ರಶ್ನೆ– ಜೀವ ಹಾಗೂ ಪರಮಾತ್ಮರಿಗೆ ವ್ಯಾವಹಾರಿಕಭೇದ ಇರುತ್ತದೆ, ಆದ್ದರಿಂದ ಪಾರಮಾರ್ಥಿಕವಾದ ಅನರ್ಥವನ್ನು ಹೇಳಲು ಸಾಧ್ಯವಿಲ್ಲವಲ್ಲವೇ?

ಉತ್ತರ – 'ಅತ್ಯಂತ' ಎಂಬ ವಿಶೇಷಣದಿಂದ ಇದಕ್ಕೆ ಉತ್ತರಿಸಿದ್ದಾರೆ. ಜೀವ ಹಾಗೂ ಪರಮಾತ್ಮರಿಗೆ ಪಾರಮಾರ್ಥಿಕವಾದ ಭೇದವೇ ಇದೆ ವ್ಯಾವಹಾರಿಕಭೇದವಿರುವುದಿಲ್ಲ. ಪಾರಮಾರ್ಥಿಕಭೇದವಿರುವ ಪ್ರಯುಕ್ತ ಜೀವನಲ್ಲಿರುವ ಅನರ್ಥವು ಪಾರಮಾರ್ಥಿಕವೇ ಆಗಿದೆ ಎಂದು ತಿಳಿಯ-ಬೇಕು.

### 'ಅತ್ಯಂತಭಿನ್ನಸ್ಯ' ಎಂಬ ಟೀಕಾಪಂಕ್ತಿಯ ಸ್ವಾರಸ್ಯ

ಮಂದಾರಮಂಜರೀ–

यद्वा भास्करमतनिरासेन अभेदासहिष्णुभेदप्रतिपादनाय **अत्यन्त**-मित्युक्तम् ।

ಯದ್ವಾ ಭಾಸ್ಕರಮತನಿರಾಸೇನ ಅಭೇದಾಸಹಿಷ್ಣುಭೇದಪ್ರತಿಪಾದನಾಯ **'ಅತ್ಯಂತಮ್' ಇತ್ಯುಕ್ತಮ್ ।**

ಅಥವಾ ಭಾಸ್ಕರರು ಜೀವಪರಮಾತ್ಮರಿಗೆ ಭೇದವನ್ನು ಒಪ್ಪಿದರೂ ಸಹ ಅಭೇದವನ್ನೂ ಒಪ್ಪುತ್ತಾರೆ. ಆದರೆ ನಮ್ಮ ಸಿದ್ಧಾಂತದಲ್ಲಿ ಜೀವ ಪರಮಾತ್ಮ-ರಿಗೆ ಇರುವ ಭೇದವು ಅಭೇದವನ್ನು ಸಹಿಸುವುದಿಲ್ಲ. ಶುದ್ಧವಾದ ಭೇದವೇ ಇರುತ್ತದೆಂದು ಪ್ರತಿಪಾದನೆ ಮಾಡುವುದಕ್ಕಾಗಿಯೂ 'ಭಿನ್ನಸ್ಯ' ಎಂಬಲ್ಲಿ 'ಅತ್ಯಂತಮ್' ಎಂಬ ವಿಶೇಷಣವನ್ನು ನೀಡಿರುತ್ತಾರೆ.

### ಈಶಪ್ರಸಾದಕ್ಕಾಗಿ ಈ ಪ್ರಕರಣ

ಮಂದಾರಮಂಜರೀ–

मोक्षस्येश्वरप्रसादसाध्यत्वेऽपि तत्साक्षात्कारं विना तत्प्रसादाभावात् अपरोक्षज्ञानजनकानां वेदान्तानां सप्रयोजनत्वात् तद्विषयकप्रवृत्तिहेतु-भूतविषयादिनिर्णायकस्यास्य प्रकरणस्यापि सप्रयोजनत्वमित्यभिप्रायः ।

ಮೋಕ್ಷಸ್ಯ ಈಶ್ವರಪ್ರಸಾದಸಾಧ್ಯತ್ವೇಽಪಿ ತತ್ಸಾಕ್ಷಾತ್ಕಾರಂ ವಿನಾ ತತ್ಪ್ರಸಾದಾಭಾವಾತ್ ಅಪರೋಕ್ಷಜ್ಞಾನಜನಕಾನಾಂ ವೇದಾಂತಾನಾಂ ಸಪ್ರಯೋಜನತ್ವಾತ್ ತದ್ವಿಷಯಕಪ್ರವೃತ್ತಿಹೇತುಭೂತವಿಷಯಾದಿನಿರ್ಣಾಯಕಸ್ಯ ಅಸ್ಯ ಪ್ರಕರಣಸ್ಯಾಪಿ ಸಪ್ರಯೋಜನತ್ವಮ್ ಇತ್ಯಭಿಪ್ರಾಯಃ।

ಮೋಕ್ಷವು ಈಶ್ವರನ ಪ್ರಸಾದದಿಂದಲೇ ದೊರೆಯುತ್ತದೆ ಎಂಬಲ್ಲಿ ಸಂದೇಹವಿಲ್ಲ. ಆದರೆ ಈಶ್ವರನ ಪ್ರಸಾದ ದೊರೆಯಬೇಕೆಂದರೆ ಈಶ್ವರವಿಷಯಕ ಅಪರೋಕ್ಷಜ್ಞಾನವು ನಮಗೆ ಉಂಟಾಗಬೇಕು. ಅಪರೋಕ್ಷಜ್ಞಾನವುಂಟಾಗಬೇಕಾದರೆ ವೇದ ಹಾಗೂ ಉಪನಿಷತ್ತುಗಳಿಂದ ಪರೋಕ್ಷಜ್ಞಾನವನ್ನು ಸಂಪಾದಿಸಬೇಕು. ಹೀಗೆ ವೇದ ಹಾಗೂ ಉಪನಿಷತ್ತುಗಳ ಅಧ್ಯಯನವು ಅತ್ಯಂತ ಸಾರ್ಥಕವಾಗಿದೆ. ಆದ್ದರಿಂದ ಅವುಗಳಲ್ಲಿ ಯಾವ ವಿಷಯವನ್ನು ಪ್ರತಿಪಾದನೆ ಮಾಡುತ್ತಿದ್ದಾರೆ, ಯಾವ ಪ್ರಯೋಜನವನ್ನು ಹೇಳುತ್ತಿದ್ದಾರೆ ಇತ್ಯಾದಿಯಾಗಿ ವಿಷಯಪ್ರಯೋಜನಗಳನ್ನು ಜಿಜ್ಞಾಸುಗಳಾದವರು ಮೊದಲು ತಿಳಿದುಕೊಳ್ಳಬೇಕು. ಅವುಗಳ ನಿರ್ಣಯಕ್ಕೋಸ್ಕರವೇ ಈ ಪ್ರಕರಣಗ್ರಂಥವು ಹೊರಟಿರುತ್ತದೆ. ಆದ್ದರಿಂದ ವೇದ ಹಾಗೂ ಉಪನಿಷತ್ತುಗಳ ವಿಷಯಾದಿಗಳನ್ನು ಸಾಧಿಸುವುದಕ್ಕಾಗಿ ಹೊರಟಿರುವ ಈ ಪ್ರಕರಣಗ್ರಂಥವು ಅತ್ಯಂತ ಸಾರ್ಥಕವೆಂದು ಮನದಟ್ಟಾಗುತ್ತದೆ.

## ಅಪರೋಕ್ಷಜ್ಞಾನಕ್ಕಾಗಿ ಪರೋಕ್ಷಜ್ಞಾನ ಬೇಕು

ಮಂದಾರಮಂಜರೀ–

नन्वेवमप्यपरोक्षज्ञानमेव मोक्षपर्यवसायि । वेदान्तैश्च परोक्षज्ञानमेव क्रियत इत्यत आह ।। **न चेति** ।। **अविदितेति** ।। परोक्षज्ञानेनाविदितेत्यर्थः ।

ನನ್ವೇವಮಪ್ಯಪರೋಕ್ಷಜ್ಞಾನಮೇವ ಮೋಕ್ಷಪರ್ಯವಸಾಯಿ । ವೇದಾಂತೈಶ್ಚ ಪರೋಕ್ಷಜ್ಞಾನಮೇವ ಕ್ರಿಯತ ಇತ್ಯತ ಆಹ – ನ ಚೇತಿ ॥ ಅವಿದಿತೇತಿ ॥ ಪರೋಕ್ಷಜ್ಞಾನೇನಾವಿದಿತಾ ಇತ್ಯರ್ಥಃ।

ಅಪರೋಕ್ಷಜ್ಞಾನವೇ ಮೋಕ್ಷಪ್ರಯೋಜನವನ್ನು ತಂದು ಕೊಡುತ್ತದೆ ಹೊರತು ಪರೋಕ್ಷಜ್ಞಾನವಲ್ಲ. ವೇದಾಂತಗಳಾದರೂ ಕೇವಲ ಪರೋಕ್ಷ-ಜ್ಞಾನವನ್ನಷ್ಟೇ ಹುಟ್ಟಿಸುತ್ತವೆ. ಪರೋಕ್ಷಜ್ಞಾನವನ್ನು ಹುಟ್ಟಿಸುವ ವೇದಾಂತ-ಗಳಿಂದ ಏನು ಪ್ರಯೋಜನ ಎಂಬ ಪ್ರಶ್ನೆಗೆ ''ನಚ'' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಪರೋಕ್ಷಜ್ಞಾನದಿಂದ ಯಾವ ಈಶ್ವರನ ಸ್ವರೂಪವು ನಿಶ್ಚಿತ-ವಾಗಿರುವುದಿಲ್ಲವೋ ಅಂತಹ ಈಶ್ವರನನ್ನೂ ಸಹ ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಿಲ್ಲ.

## ಲೌಕಿಕವಿಷಯದಲ್ಲಿ ಹೀಗಲ್ಲ

ಮಂದಾರಮಂಜರೀ–

घटाद्यपरोक्षज्ञानस्य परोक्षज्ञानपूर्वकत्वनियमाभावेऽपि ईश्वरापरोक्ष-ज्ञानस्योपासनासाध्यत्वात् उपासनायाश्च परोक्षज्ञानपूर्वकत्वनियमादिति भावः ।

ಘಟಾದ್ಯಪರೋಕ್ಷಜ್ಞಾನಸ್ಯ ಪರೋಕ್ಷಜ್ಞಾನಪೂರ್ವಕತ್ವನಿಯಮಾಭಾವೇ-ಽಪಿ ಈಶ್ವರಾಪರೋಕ್ಷಜ್ಞಾನಸ್ಯೋಪಾಸನಾಸಾಧ್ಯತ್ವಾತ್, ಉಪಾಸನಾಯಾಶ್ಚ ಪರೋಕ್ಷಜ್ಞಾನಪೂರ್ವಕತ್ವನಿಯಮಾದಿತಿ ಭಾವಃ।

ಸ್ವಲ್ಪ ವ್ಯತ್ಯಾಸವನ್ನು ಇಲ್ಲಿ ಗಮನಿಸಬೇಕು. ಘಟಪಟಾದಿಗಳ ಬಗ್ಗೆ ಅಪರೋಕ್ಷಜ್ಞಾನವು ಹುಟ್ಟಬೇಕಾದರೆ ಮೊದಲು ಪರೋಕ್ಷಜ್ಞಾನವಿರ-ಬೇಕೆಂಬ ನಿಯಮವಿಲ್ಲ. ಆದರೆ ಭಗವಂತನ ವಿಷಯದಲ್ಲಿ ಮಾತ್ರ ಹೀಗಲ್ಲ.

ಅವನ ಅಪರೋಕ್ಷಜ್ಞಾನವು ಹುಟ್ಟಬೇಕೆಂದರೆ ಮೊದಲು ಉಪಾಸನೆಯನ್ನು ಮಾಡಿರಬೇಕು. ಉಪಾಸನೆ ಮಾಡಬೇಕಾದರೆ ಮೊದಲು ಶಾಸ್ತ್ರಗ್ರಂಥಗಳಿಂದ ಪರೋಕ್ಷಜ್ಞಾನವನ್ನು ನಿಶ್ಚಿತವಾಗಿ ಪಡೆದಿರಬೇಕು. ಪರೋಕ್ಷಜ್ಞಾನವನ್ನು ಹೀಗೆ ಶಾಸ್ತ್ರಗಳ ಅಧ್ಯಯನದಿಂದ ತಿಳಿದಿದ್ದರೆ ಮಾತ್ರ ಉಪಾಸನೆ ಮಾಡಲು ಸಾಧ್ಯ. ಅಂತಹ ಉಪಾಸನೆಯಿಂದಷ್ಟೇ ಅಪರೋಕ್ಷಜ್ಞಾನವನ್ನು ಹೊಂದಲು ಸಾಧ್ಯ.

## ಪರೋಕ್ಷಜ್ಞಾನಕ್ಕಾಗಿ ಶಾಸ್ತ್ರಗಳೇ ಏಕೆ?

ಮಂದಾರಮಂಜರೀ–

नन्वीश्वरपरोक्षज्ञानं लोकत एव प्राप्तमिति किं वेदान्तैः? इत्याशङ्क्याह – **सकलेति** ।।

ನನ್ವೀಶ್ವರಪರೋಕ್ಷಜ್ಞಾನಂ ಲೋಕತ ಏವ ಪ್ರಾಪ್ತಮ್ ಇತಿ, ಕಿಂ ವೇದಾಂತ್ಯೈಃ? ಇತ್ಯಾಶಂಕ್ಯ ಆಹ – ಸಕಲೇತಿ ॥

ಈಶ್ವರನ ಪರೋಕ್ಷಜ್ಞಾನವನ್ನು ಶಾಸ್ತ್ರಗಳ ಅಧ್ಯಯನದಿಂದಲೇ ಏಕೆ ಪಡೆಯಬೇಕು? ಲೋಕದ ವ್ಯವಹಾರದಿಂದಲೇ ಅವನ ಬಗ್ಗೆ ತಿಳಿದುಕೊಳ್ಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಸಕಲಗುಣಾಕರತಯಾ' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ.

## ಅನುಮಾನಾದಿಗಳು ಉಪಾಸನೆಗೆ ಅಂಗವಲ್ಲ

ಮಂದಾರಮಂಜರೀ–

यद्यपि कार्यत्वाद्यनुमानेनेश्वरस्वरूपमात्रमवगतम् । तथापि तन्नोपासनाङ्गम् । श्रुत्याद्युक्तगुणविशिष्टस्यैवोपास्यत्वादिति भावः ।

ಯದ್ಯಪಿ ಕಾರ್ಯತ್ವಾತ್ ಅನುಮಾನೇನ ಈಶ್ವರಸ್ವರೂಪಮಾತ್ರಮ್

ಅವಗತಮ್ । ತಥಾಪಿ ತನ್ನೋಪಾಸನಾಂಗಮ್ । ಶ್ರುತ್ಯಾದ್ಯುಕ್ತಗುಣವಿಶಿಷ್ಟಸ್ಯೈವ ಉಪಾಸ್ಯತ್ವಾತ್ ಇತಿ ಭಾವಃ।

ವಸ್ತುತಃ ವೇದಾಂತದಿಂದಲೇ ಈಶ್ವರನ ಪರೋಕ್ಷಜ್ಞಾನವನ್ನು ಹೊಂದಬೇಕೆಂಬ ನಿಯಮವೇನಿಲ್ಲ. 'ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್' ಇವೇ ಮೊದಲಾದ ಅನುಮಾನಗಳಿಂದಲೂ ಈಶ್ವರನ ಸ್ವರೂಪವನ್ನು ತಿಳಿಯಬಹುದು. ಆದರೆ ಹೀಗೆ ಅನುಮಾನದಿಂದ ತಿಳಿಯಲ್ಪಟ್ಟ ಜ್ಞಾನವು ಉಪಾಸನೆಗೆ ಅಂಗವಾಗುವುದಿಲ್ಲ. ಶ್ರುತ್ಯಾದಿಗಳಲ್ಲಿ ಯಾವ ಯಾವ ಗುಣಗಳನ್ನು ಭಗವಂತನಲ್ಲಿ ಪ್ರತಿಪಾದನೆ ಮಾಡಲಾಗಿದೆಯೋ ಆ ಎಲ್ಲಾ ಗುಣಗಳಿಂದ ಪರಿಪೂರ್ಣನೆಂದು ಭಗವಂತನನ್ನು ಉಪಾಸನೆ ಮಾಡಬೇಕು. ಆದಕ್ಕಾಗಿ ಶಾಸ್ತ್ರಾಧ್ಯಯನವನ್ನು ಅವಶ್ಯವಾಗಿ ಮಾಡಬೇಕು.

## ಕರ್ಮಕಾಂಡವೂ ಕೂಡ ಅಂಗ

ಮಂದಾರಮಂಜರೀ–

कर्मकाण्डस्यापीश्वरज्ञानहेतुकर्मप्रतिपादकत्वात् ब्रह्मण्येव महातात्पर्यमित्याह – **अशेषेति** ।। न चैवं ब्रह्ममीमांसावैयर्थ्यम् । वेदार्थनिर्णायकन्यायव्युत्पादकत्वादित्याह – **तदुपकरणेति** ।।

ಕರ್ಮಕಾಂಡಸ್ಯಾಪಿ ಈಶ್ವರಜ್ಞಾನಹೇತುಕರ್ಮಪ್ರತಿಪಾದಕತ್ವಾತ್ ಬ್ರಹ್ಮಣ್ಯೇವ ಮಹಾತಾತ್ಪರ್ಯಮಿತ್ಯಾಹ – ಅಶೇಷೇತಿ ॥ ನ ಚೈವಂ ಬ್ರಹ್ಮಮೀಮಾಂಸಾವೈಯರ್ಥ್ಯಮ್ । ವೇದಾರ್ಥನಿರ್ಣಾಯಕನ್ಯಾಯವ್ಯುತ್ಪಾದಕತ್ವಾದಿತ್ಯಾಹ – ತದುಪಕರಣೇತಿ ॥

ವೇದದಲ್ಲಿರುವ ಕರ್ಮಕಾಂಡವು ಕೇವಲ ಕರ್ಮವನ್ನಷ್ಟೇ ಪ್ರತಿಪಾದನೆ ಮಾಡುತ್ತಿದೆ, ಈಶ್ವರನನ್ನು ಪ್ರತಿಪಾದನೆ ಮಾಡುತ್ತಿಲ್ಲವಲ್ಲ? ಎಂಬ ಪ್ರಶ್ನೆಗೆ

ಹೀಗೆ ಉತ್ತರಿಸಬೇಕು. ಭಗವಂತನ ಜ್ಞಾನಕ್ಕೆ ಯಾವ ಕರ್ಮಾಚರಣೆಯು ಪೂರಕವಾಗಿದೆಯೋ ಅಂತಹ ಕರ್ಮಾಚರಣೆಯನ್ನಷ್ಟೇ ಕರ್ಮಕಾಂಡಗಳು ಪ್ರತಿಪಾದಿಸುತ್ತಿವೆ. ಆದ್ದರಿಂದ ಅವುಗಳಿಗೂ ಸಹ ಬ್ರಹ್ಮನಲ್ಲಿಯೇ ಮಹಾ-ತಾತ್ಪರ್ಯವಿರುತ್ತದೆ ಎಂದು ತಿಳಿಸಲು 'ಅಶೇಷಾಮ್ನಾಯಾಃ' ಎಂದು ಹೇಳಿರು-ತ್ತಾರೆ. ಹಾಗಾದರೆ ಬ್ರಹ್ಮಮೀಮಾಂಸಾಶಾಸ್ತ್ರಗಳು ವ್ಯರ್ಥವಲ್ಲವೇ? ಕೇವಲ ವೇದಾಧ್ಯಯನದಿಂದಲೇ ಭಗವಂತನ ಪರೋಕ್ಷಜ್ಞಾನವನ್ನು ಹೊಂದಲು ಸಾಧ್ಯವಿರುವಾಗ, ಬ್ರಹ್ಮಮೀಮಾಂಸಾಶಾಸ್ತ್ರವಾಗಲೀ ಅವುಗಳಿಗೆ ಅಂಗ-ಭೂತವಾದ ಇಂತಹ ಪ್ರಕರಣಗ್ರಂಥಗಳ ಅಧ್ಯಯನವನ್ನಾಗಲೀ ಏಕೆ ಮಾಡ-ಬೇಕು? ಎಂದು ಪ್ರಶ್ನಿಸಬಾರದು. ವೇದಾರ್ಥನಿರ್ಣಾಯಕವಾದ ನ್ಯಾಯ-ಗಳನ್ನು ಬ್ರಹ್ಮಮೀಮಾಂಸಾಶಾಸ್ತ್ರಗಳಲ್ಲಿ ಸಮರ್ಥಿಸಿದ್ದಾರೆ. ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಸಮರ್ಥಿಸಲ್ಪಟ್ಟ ನ್ಯಾಯಗಳನ್ನು ತಿಳಿದರೆ ಮಾತ್ರ ಸಕಲ ವೇದಗಳ ಸಾರ ಹಾಗೂ ಪ್ರತಿಪಾದ್ಯವಾದ ವಿಷಯ ಯಾವುದೆಂದು ನಿಶ್ಚಯಿಸಲು ಸಾಧ್ಯವಾಗುತ್ತದೆ. ಅದಕ್ಕೋಸ್ಕರ ವೇದಾಧ್ಯಯನ ಮಾಡಬೇಕೆಂದರೆ ವೇದಕ್ಕೆ ಉಪಕರಣವಾದ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನವನ್ನು ಮಾಡಲೇ ಬೇಕು.

**ಗಮನಿಸಿ**

ಬ್ರಹ್ಮಮೀಮಾಂಸಾಶಾಸ್ತ್ರದಿಂದ ಕೂಡಿರುವ ವೇದಗಳ ವಿಷಯ, ಪ್ರಯೋ-ಜನಾದಿಗಳನ್ನು ತಿಳಿಸುವುದಕ್ಕಾಗಿ ಈ ಗ್ರಂಥವು ಹೊರಟಿರುವುದರಿಂದ ಈ 'ತತ್ವಪ್ರಕಾಶಿಕಾ' ಎಂಬ ಗ್ರಂಥವು ಆರಂಭಣೀಯ ಎಂದು ಸಿದ್ಧವಾಗುತ್ತದೆ.

## ಶಾಸ್ತ್ರದ ವಿಷಯಾದಿಗಳೇ ಇದಕ್ಕೆ ಸಂಬಂಧಿಸಿವೆ.

ಶ್ರೀನಿವಾಸತೀರ್ಥೀಯ –

नन्विदं प्रकरणमनारम्भणीयं विषयादिशून्यत्वादित्याशङ्क्यास्य

**प्रकरणत्वात्प्रकरणस्य शास्त्रैकदेशसम्बन्धित्वाच्छास्त्रे यद्विषयादिकं तदेव अस्यापि प्रकरणस्य विषयादिकं भविष्यतीत्यभ्युपेत्यास्य शास्त्रस्य विषयादिकं दर्शयति – परमात्मन इत्यादिना ।**

**'ನನ್ವಿದಂ ಪ್ರಕರಣಮನಾರಂಭಣೀಯಂ ವಿಷಯಾದಿಶೂನ್ಯತ್ವಾತ್' ಇತ್ಯಾಶಂಕ್ಯ , ಅಸ್ಯ ಪ್ರಕರಣತ್ವಾತ್ ಪ್ರಕರಣಸ್ಯ ಶಾಸ್ತ್ರೈಕದೇಶಸಂಬಂಧಿತ್ವಾತ್ ಶಾಸ್ತ್ರೇ ಯದ್ವಿಷಯಾದಿಕಂ ತದೇವ ಅಸ್ಯಾಪಿ ಪ್ರಕರಣಸ್ಯ ವಿಷಯಾದಿಕಂ ಭವಿಷ್ಯತಿ ಇತ್ಯುಪೇತ್ಯ , ಅಸ್ಯ ವಿಷಯಾದಿಕಂ ದರ್ಶಯತಿ – ಪರಮಾತ್ಮನ ಇತ್ಯಾದಿನಾ ॥**

ವಿಷಯಪ್ರಯೋಜನಾದಿಗಳು ಇಲ್ಲದ ಕಾರಣ ಈ ಪ್ರಕರಣಗ್ರಂಥವು ಅನಾರಂಭ-ಣೀಯವಾಗಿದೆಯಲ್ಲವೇ ಎಂಬುದಾಗಿ ಆಕ್ಷೇಪ ಮಾಡಿಕೊಂಡು ಈ ಪ್ರಕರಣವು ಶಾಸ್ತ್ರೈಕದೇಶಸಂಬಂಧಿಯಾಗಿದೆ. ಆದ್ದರಿಂದ ಶಾಸ್ತ್ರಕ್ಕೆ ಯಾವ ವಿಷಯಪ್ರಯೋ-ಜನಾದಿಗಳಿರುತ್ತವೋ ಅವೇ ಈ ಪ್ರಕರಣಗ್ರಂಥಕ್ಕೂ ಕೂಡ ಸಂಬಂಧಪಡುತ್ತವೆ ಎಂದು ಅಂಗೀಕರಿಸಿದ್ದಾರೆ. ಆದ್ದರಿಂದ ಪ್ರಕೃತ ಟೀಕೆಯಲ್ಲಿ 'ಪರಮಾತ್ಮನಃ' ಇತ್ಯಾದಿ ಗ್ರಂಥ-ದಿಂದ ಶಾಸ್ತ್ರದ ವಿಷಯಪ್ರಯೋಜನಾದಿಗಳನ್ನು ಪ್ರದರ್ಶನ ಮಾಡುತ್ತಿದ್ದಾರೆ.

ವಿವರಣೆ – ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ ಈ ನಾಕನ್ನೂ ಅನುಬಂಧಚತುಷ್ಟಯ ಎಂದು ಕರೆಯುತ್ತಾರೆ. ಪ್ರತಿಯೊಂದು ಗ್ರಂಥದ ಪ್ರಾರಂಭದಲ್ಲಿಯೂ ಈ ಅನುಬಂಧಚತುಷ್ಟಯವು ಇರಲೇ ಬೇಕು. ಯಾವ ಗ್ರಂಥದಲ್ಲಿ ಇರುವುದಿಲ್ಲವೋ ಆ ಗ್ರಂಥವು ತ್ಯಾಜ್ಯವಾಗುತ್ತದೆ. ಪ್ರಕೃತ ಉಪಾಧಿ ಖಂಡನ ಎಂಬ ಗ್ರಂಥದಲ್ಲಿ ಈ ಅನುಬಂಧಚತುಷ್ಟಯವು ಇರುತ್ತದೆಂದು ಸಾಧನೆ ಮಾಡುತ್ತಿದ್ದಾರೆ.

ಈ ಸಣ್ಣ ಗ್ರಂಥಕ್ಕೆ ವಿಷಯಪ್ರಯೋಜನಾದಿಗಳೇ ಇರುವುದಿಲ್ಲ ಆದ್ದರಿಂದ ಈ ಗ್ರಂಥವು ತ್ಯಾಜ್ಯವಾಗಿದೆ ಎಂಬುದು ಇಲ್ಲಿನ ಆಕ್ಷೇಪ. ಇದಕ್ಕೆ ವಿಷಯ-ಪ್ರಯೋಜನಾದಿಗಳು ಈ ಗ್ರಂಥಕ್ಕೂ ಕೂಡ ಇದ್ದೇ ಇರುತ್ತವೆ. ಆದರೆ ನೇರವಾಗಿ

ವಿಷಯಾದಿಗಳು ನಿರೂಪಿತವಾಗದೆ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಾದಿಗಳೇ ಇಲ್ಲಿಗೂ ಸಂಬಂಧಪಡುತ್ತವೆಂದು ಉತ್ತರಿಸುತ್ತಿದ್ದಾರೆ.

ಇದು ಪ್ರಕರಣ ಗ್ರಂಥ. ಪ್ರಕರಣಗ್ರಂಥವು ಶಾಸ್ತ್ರದ ಯಾವುದಾದರೂ ಒಂದು ಪ್ರಮೇಯಕ್ಕೆ ಉಪಪಾದಕವಾಗಿ ಹೊರಟಿರುತ್ತದೆ. ಆದ್ದರಿಂದ ಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಾದಿಗಳನ್ನೇ ಪ್ರಕರಣಗ್ರಂಥದಲ್ಲೂ ಕೂಡ ತಿಳಿಯಬೇಕು.

ಶಾಸ್ತ್ರೈಕದೇಶಸಂಬಂಧಂ ಶಾಸ್ತ್ರಕಾರ್ಯಾಂತರೇ ಸ್ಥಿತಮ್ ।
ಆಹುಃ ಪ್ರಕರಣಂ ನಾಮ ಗ್ರಂಥಭೇದೋ ವಿಪಶ್ಚಿತಃ ॥

ಶಾಸ್ತ್ರದ ಏಕದೇಶಕ್ಕೆ ಸಂಬಂಧಪಟ್ಟಿರುತ್ತದೆ. ಶಾಸ್ತ್ರದ ಒಂದು ವಿಷಯದ ಸಮ-ರ್ಥನೆಗಾಗಿ ಹೊರಟಿರುತ್ತದೆ. ಇದನ್ನು ಜ್ಞಾನಿಗಳು ಪ್ರಕರಣಗ್ರಂಥ ಎಂದು ಕರೆ-ಯುತ್ತಾರೆ.

## ಅತ್ಯಂತಭಿನ್ನಸ್ಯ ಎಂಬುದರ ವ್ಯಾಖ್ಯಾನ

ಶ್ರೀನಿವಾಸತೀರ್ಥೀಯ –

जीवपरमात्मनोर्भेदाभेदाविति भास्करः । तन्निराकरणायाह – **अत्यन्तभिन्नस्येति** । दुःखाद्यनर्थस्याप्यानन्दादिवत्स्वाभाविकत्वे प्रसादादपि तन्निवृत्त्यनुपपत्तिरित्यत उक्तम् – **अविद्येत्यादि** ।

'ಜೀವಪರಮಾತ್ಮನೋಃ ಭೇದಭೇದೌ' ಇತಿ ಭಾಸ್ಕರಃ । ತನ್ನಿರಾಕರಣಾಯ ಆಹ – ಅತ್ಯಂತಭಿನ್ನಸ್ಯೇತಿ ॥ 'ದುಃಖಾದ್ಯನರ್ಥಸ್ಯಾಪಿ ಆನಂದಾದಿವತ್ ಸ್ವಾಭಾವಿಕತ್ವೇ ಪ್ರಸಾದಾದಪಿ ತನ್ನಿವೃತ್ತ್ಯನುಪಪತ್ತಿಃ' ಇತ್ಯತ ಉಕ್ತಮ್ – ಅವಿದ್ಯೇತ್ಯಾದಿ ॥

ಭಾಸ್ಕರರು ಜೀವ ಹಾಗೂ ಪರಮಾತ್ಮರಿಗೆ ಭೇದಾಭೇದವನ್ನು ಅಂಗೀಕರಿಸುತ್ತಾರೆ. ಅವರ ಮತವನ್ನು ನಿರಾಕರಣೆ ಮಾಡುವುದಕ್ಕಾಗಿ ಅತ್ಯಂತಭಿನ್ನಸ್ಯ ಎಂದು ಟೀಕೆಯಲ್ಲಿ ಹೇಳಿರುತ್ತಾರೆ.

ದುಃಖಾದ್ಯನರ್ಥಗಳೂ ಕೂಡ ಆನಂದಾದಿಗಳಂತೆ ಸ್ವಾಭಾವಿಕ ಎನ್ನುವುದಾದರೆ ಪ್ರಸಾದಿಂದಲೂ ಕೂಡ ದುಃಖಾದಿಗಳು ನಿವೃತ್ತಿಯಾಗದಿರಬೇಕಾದೀತು ಎಂಬ ಪ್ರಶ್ನೆಗೆ 'ಅವಿದ್ಯಾ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**ವಿವರಣೆ – ಪ್ರಶ್ನೆ –** ಟೀಕೆಯಲ್ಲಿ ಪರಮಾತ್ಮನಃ ಅತ್ಯಂತಭಿನ್ನಸ್ಯ ಎಂದು ಹೇಳಿದ್ದಾರೆ. ಇಲ್ಲಿ ಅತ್ಯಂತಪದವನ್ನು ಏಕೆ ಪ್ರಯೋಗಿಸಿದ್ದಾರೆ? ಕೇವಲ ಭಿನ್ನಸ್ಯ ಎಂದಷ್ಟೇ ಹೇಳಬಹುದಿತ್ತಲ್ಲವೇ?

ಉತ್ತರ – ಭಾಸ್ಕರಾಚಾರ್ಯರು ಜೀವ ಹಾಗೂ ಪರಮಾತ್ಮರಿಗೆ ಭೇದವೂ ಇದೆ ಅಭೇದವೂ ಇದೆ ಎಂದು ಹೇಳುತ್ತಾರೆ. ಅಭೇದವನ್ನು ಒಪ್ಪುವ ಅವರು ಭೇದ-ವನ್ನೂ ಕೂಡ ಜೊತೆಯಲ್ಲೇ ಒಪ್ಪುತ್ತಾರೆ. ಪ್ರಕೃತ ಭಿನ್ನಸ್ಯ ಎಂದಷ್ಟೇ ಟೀಕೆಯಲ್ಲಿ ಹೇಳಿದ್ದರೆ ಭಾಸ್ಕರರ ಸಿದ್ಧಾಂತದಂತೆ ಜೀವ ಪರಮಾತ್ಮರಿಗೆ ಅಭೇದದ ಜೊತೆಗಿರುವ ಭೇದದ ಪ್ರತೀತಿಯು ಬರುತ್ತಿತ್ತು. ಅಭೇದವಿಶಿಷ್ಟ ಭೇದವುಳ್ಳ ಜೀವನು ನಮ್ಮ ಮತದಲ್ಲಿ ವಿಷಯನಾಗಬೇಕಾಗುತ್ತಿತ್ತು. ಅದಕ್ಕಾಗಿ ಅತ್ಯಂತ- ಭಿನ್ನಸ್ಯ ಎಂದು ಹೇಳಿದರು. ಅತ್ಯಂತ ಎಂಬ ಪದವು ಅಭೇದವನ್ನು ವ್ಯಾವರ್ತನೆ ಮಾಡುತ್ತದೆ. ಕೇವಲ ಭೇದವುಳ್ಳ ಜೀವನು ಎಂದು ಇದರ ಅರ್ಥ. ಭಾಸ್ಕರರು ಕೇವಲ ಭೇದವನ್ನು ಜೀವ ಪರಮಾತ್ಮರಿಗೆ ಹೇಳುವುದಿಲ್ಲ. ಆದ್ದರಿಂದ ಅವರ ಮತವನ್ನು ವ್ಯಾವೃತ್ತಿ ಮಾಡಿದಂತಾಯಿತು. ಹೀಗೆ ಅತ್ಯಂತ ಎಂಬ ಪದದಿಂದ ನಾವು ಹೇಳುವ ಭೇದದಲ್ಲಿ ಅಸಾಧಾರಣ್ಯವನ್ನು ತೋರಿಸಿದ್ದಾರೆ.

## ಅವಿದ್ಯೆಯು ಸ್ವರೂಪತಃ ಅನಾದಿ; ಕಾಮಾದಿಗಳು ಪ್ರವಾಹತಃ ಅನಾದಿ

ಶ್ರೀನಿವಾಸತೀರ್ಥೀಯ –

अविद्यादेरप्यन्यनिमित्तकत्वे निमित्तान्तरपरंपरयाऽनवस्था परिहारायोक्तम् **अनादीति** । अविद्याभावरूपा । **कामो** रागः । कर्म- काम्यं निषिद्धं च । **आदिपदेन** मोहग्रहणम् । अविद्याया अनादित्वं स्वरूपेण । कामादेस्तु प्रवाहत इति द्रष्टव्यम् । **अन्यथाकारः** स्वरूपापेक्षयान्यथाप्रतीयमान आकारः ।

**ಅವಿದ್ಯಾದೇರಪ್ಯನಿಮಿತ್ತಕತ್ವೇ ನಿಮಿತ್ತಾಂತರಪರಂಪರಯಾ ಅನವಸ್ಥಾ-ಪರಿಹಾರಾಯೋಕ್ತಮ್ ಅನಾದೀತಿ ॥ ಅವಿದ್ಯಾ ಭಾವರೂಪಾ । ಕಾಮೋ ರಾಗಃ । ಕರ್ಮ ಕಾಮ್ಯಂ ನಿಷಿದ್ಧಂ ಚ । ಆದಿಪದೇಹ ಮೋಹಗ್ರಹಣಮ್ । ಅವಿದ್ಯಾಯಾ ಅನಾದಿತ್ವಂ ಸ್ವರೂಪೇಣ । ಕಾಮಾದೇಸ್ತು ಪ್ರವಾಹತಃ ಇತಿ ದ್ರಷ್ಟವ್ಯಮ್ । ಅನ್ಯಥಾಕಾರಃ ಸ್ವರೂಪಾಪೇಕ್ಷಯಾನ್ಯಥಾಪ್ರತೀಯಮಾನ ಆಕಾರಃ ॥**

ಅಜ್ಞಾನಾದಿಗಳಿಗೂ ಕೂಡ ಮತ್ತೊಂದು ನಿಮಿತ್ತ ಇರುವುದಾದರೆ ಅದಕ್ಕೂ ಮತ್ತೊಂದು ನಿಮಿತ್ತ ಇರಬೇಕಾಗುತ್ತದೆ. ಹೀಗೆ ಪರಂಪರೆಯನ್ನೊಪ್ಪಿದರೆ ಅನವಸ್ಥಾ ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ ಅವಿದ್ಯೆಯು ಅನಾದಿಯಾಗಿದೆ ಎಂಬುದನ್ನು ಅನಾದಿಪದದಿಂದ ತಿಳಿಸಿದ್ದಾರೆ.

ಅವಿದ್ಯೆ ಎಂದರೆ ಭಾವರೂಪಜ್ಞಾನ ಎಂದರ್ಥ. ಕಾಮ ಎಂದರೆ ಅಭಿಲಾಷೆ ಎಂದರ್ಥ. ಕರ್ಮವನ್ನು ಕಾಮ್ಯಕರ್ಮ ನಿಷಿದ್ಧಕರ್ಮ ಎಂಬ ಎರಡು ಬಗೆಯಲ್ಲಿದೆ ಎಂದು ತಿಳಿಯಬೇಕು. ಆದಿಪದದಿಂದ ಮೋಹವನ್ನು ಸ್ವೀಕರಿಸಬೇಕು. ಅಜ್ಞಾನವು ಸ್ವರೂಪತಃ ಅನಾದಿಯಾಗಿದೆ. ಕಾಮಾದಿಗಳು ಪ್ರವಾಹತಃ ಅನಾದಿಯಾಗಿವೆ ಎಂಬ ವ್ಯತ್ಯಾಸವನ್ನು ಗಮನಿಸಬೇಕು. ಅನ್ಯಥಾಕಾರ ಎಂದರೆ, ಸ್ವರೂಪಾಪೇಕ್ಷೆಯಿಂದ ಅನ್ಯಥಾಪ್ರತೀಯಮಾನವಾದ ಆಕಾರವುಳ್ಳದ್ದು ಎಂದರ್ಥ.

**ವಿವರಣೆ – ಅನಾದ್ಯವಿದ್ಯಾಕಾಮಕರ್ಮಾದಿನಿಮಿತ್ತಃ ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿ ಅನಾದಿಯನ್ನು ಅವಿದ್ಯೆಗೆ ಮಾತ್ರ ವಿಶೇಷಣವನ್ನಾಗಿ ತಿಳಿಯಬಾರದು. ಕಾಮಕರ್ಮಾದಿಗಳಲ್ಲೂ ಕೂಡ ವಿಶೇಷಣವಾಗಿದೆ ಎಂದು ತಿಳಿಯಬೇಕು. ಅವಿದ್ಯೆಯು ಅನಾದಿಯಾಗಿದೆಯೆಂದು ಹೇಳಿದ್ದರಿಂದ ಅನವಸ್ಥಾ ದೋಷವು ಪರಿಹಾರವಾಗುತ್ತದೆ. ಮತ್ತು ಈ ಅವಿದ್ಯೆಯು ಸ್ವರೂಪತಃ ಅನಾದಿಯಾಗಿದೆ. ಕಾಮ ಕರ್ಮ ಮೊದಲಾದವುಗಳು ಪ್ರವಾಹತಃ ಅನಾದಿ-ಯಾಗಿವೆ ಎಂಬ ವ್ಯತ್ಯಾಸವನ್ನಷ್ಟೇ ತಿಳಿಯಬೇಕು.**

## ‘ಪರಮಾರ್ಥತಃ ಏವ ಅನ್ಯಥಾಕಾರಃ’ ಎಂಬುದರ ವ್ಯಾಖ್ಯಾನ

ಶ್ರೀನಿವಾಸತೀರ್ಥೀಯ –

ननु दुःखाद्यनर्थरूपान्यथाकारस्य मिथ्यात्वे तदपरमार्थं स्वत एव निवर्तते । न तत्र परमेश्वरप्रसादापेक्षा । न हि शुक्तौ रजताद्यन्यथाकारनिवृत्तौ कस्यचित्प्रसादोऽपेक्षित इत्यत उक्तम्– **परमार्थ एवेति ।। प्रसादादृत इति** । यस्य प्रसादात्परमार्तिरूपादिति श्रुतेरिति भावः ।।

**‘ನನು ದುಃಖಾದ್ಯನರ್ಥರೂಪಾನ್ಯಥಾಕಾರಸ್ಯ ಮಿಥ್ಯಾತ್ವೇ ತದಪರಮಾರ್ಥಂ ಸ್ವತ ಏವ ನಿವರ್ತತೇ । ನ ತತ್ರ ಪರಮೇಶ್ವರಪ್ರಸಾದಾಪೇಕ್ಷಾ । ನ ಹಿ ಶುಕ್ತೌ ರಜತಾದ್ಯನ್ಯಥಾಕಾರನಿವೃತ್ತೌ ಕಸ್ಯಚಿತ್ ಪ್ರಸಾದೋಽಪೇಕ್ಷಿತಃ’ ಇತ್ಯತ ಉಕ್ತಮ್ – ಪರಮಾರ್ಥ ಏವೇತಿ ॥ ಪ್ರಸಾದಾದೃತೇ ಇತಿ ॥ ‘ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್’ ಇತಿ ಶ್ರುತೇರಿತಿ ಭಾವಃ ॥**

ದುಃಖಾದ್ಯನರ್ಥರೂಪವಾದ ಅನ್ಯಥಾಕಾರತ್ವವು ಮಿಥ್ಯಾ ಎಂದು ಹೇಳುವುದಾದರೆ ಅಪಾರಮಾರ್ಥಿಕ ಎಂದು ಹೇಳಿದಂತಾಯಿತು. ಆದ್ದರಿಂದ ಇದು ಸ್ವತಃ ನಿವೃತ್ತವಾಗುತ್ತದೆ. ಇದರ ನಿವೃತ್ತಿಗೆ ಪರಮಾತ್ಮನ ಪ್ರಸಾದದ ಅಪೇಕ್ಷೆಯು ಇರುವುದಿಲ್ಲ. ಶುಕ್ತಿಯಲ್ಲಿ ತೋರುವ ರಜತಾದಿ ಅನ್ಯಥಾಕಾರವು ಮಿಥ್ಯಾಭೂತವಾದ್ದರಿಂದ ಸ್ವತಃ ನಿವೃತ್ತವಾಗುತ್ತದೆ. ಅದಕ್ಕೆ ಯಾರೊಬ್ಬರ ಪ್ರಸಾದದ ಅಪೇಕ್ಷೆಯೂ ಇರುವುದಿಲ್ಲವಷ್ಟೇ. ಈ ಪ್ರಶ್ನೆಗೆ ಪರಮಾರ್ಥತ ಏವ ಎಂಬುದರಿಂದ ಉತ್ತರಿಸಿದ್ದಾರೆ. ಯಸ್ಯಪ್ರಸಾದಾತ್ ಪರಮಾರ್ತಿರೂಪಾತ್ ಎಂಬ ಶ್ರುತಿಯು ಹೇಳಿದಂತೆ ಪಾರಮಾರ್ಥಿಕವಾದ ದುಃಖಾದಿಗಳ ನಿವೃತ್ತಿಗಾಗಿ ಭಗವತ್ಪ್ರಸಾದವನ್ನು ಅಪೇಕ್ಷಿಸಲೇ ಬೇಕು.

## ಪ್ರಶ್ನೋತ್ತರ

**ಪ್ರಶ್ನೆ – ದುಃಖಾದ್ಯನರ್ಥಗಳ ನಿವೃತ್ತಿಗಾಗಿ ಭಗವತ್ಪ್ರಸಾದವನ್ನು ಅಪೇಕ್ಷಿಸಬೇಕೆಂದು ಟೀಕೆಯಲ್ಲಿ ಹೇಳಿದ್ದಾರೆ. ಆದರೆ ದುಃಖಾದ್ಯನರ್ಥಗಳು ಮಿಥ್ಯಾಭೂತವಾಗಿವೆ.**

ಮಿಥ್ಯಾಭೂತವಾದ ಪದಾರ್ಥಗಳಿಗೆ ಸ್ವಾಭಾವಿಕವಾಗಿಯೇ ನಿವೃತ್ತಿಯಿರುತ್ತದೆ. ಹೀಗಿರುವಾಗ ಭಗವಂತನ ಪ್ರಸಾದ ಏಕೆ ಬೇಕು? ಆದ್ದರಿಂದ ದುಃಖಾದ್ಯನರ್ಥಃ ನ ಪರಮೇಶ್ವರಪ್ರಸಾದಾದ್ ಋತೇ ಅಪಗಚ್ಛತಿ ಎಂದು ಟೀಕೆಯಲ್ಲಿ ಹೇಳಿದ್ದು ಹೇಗೆ ಸರಿ?

ಉತ್ತರ – ಈ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಪರಮಾರ್ಥ ಏವ ಅನ್ಯಥಾಕಾರಃ ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ಅನ್ಯಥಾಕಾರವು ಶುಕ್ತಿರಜತದಂತೆ ಮಿಥ್ಯಾ-ಭೂತವಾಗಿಲ್ಲ. ಪಾರಮಾರ್ಥಿಕಸತ್ಯವೇ ಆಗಿದೆ. ಸತ್ಯಭೂತವಾದ ಇದರ ನಿವೃತ್ತಿಗಾಗಿ ಭಗವತ್ಪ್ರಸಾದವನ್ನು ಅಪೇಕ್ಷಿಸುವುದು ಸಮಂಜಸವೇ ಆಗುತ್ತದೆ. ಭಗವತ್ಪ್ರಸಾದವನ್ನು ಅಪೇಕ್ಷಿಸದೇ ಇದ್ದರೆ ಈ ದುಃಖಾದ್ಯನರ್ಥಗಳು ಪರಿಹಾರ-ವಾಗುವುದೇ ಇಲ್ಲ. 'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್' ಎಂಬ ಶ್ರುತಿಯು ಇದನ್ನೇ ಪ್ರತಿಪಾದನೆ ಮಾಡುತ್ತಿದೆ.

## ಕಠಿಣಪದಗಳ ಅರ್ಥ

ಶ್ರೀನಿವಾಸತೀರ್ಥೀಯ –

**अविदितेति** ।। श्रवणादिना परोक्षत इत्यर्थः । तर्हि कथं तद्वेदनमपेक्षत इत्यत उक्तम् । **सकलेति** । **आकरः** खनिः । **गन्धेति** । लेशेत्यर्थः । गन्धस्सौरभलेशयोरित्यमरः ।

ಅವಿದಿತೇತಿ ॥ ಶ್ರವಣಾದಿನಾ ಪರೋಕ್ಷತ ಇತ್ಯರ್ಥಃ। ತರ್ಹಿ ಕಥಂ ತದ್ವೇ-ದನಮಪೇಕ್ಷತ ಇತ್ಯತ ಉಕ್ತಮ್ – ಸಕಲೇತಿ ॥ ಆಕರಃ ಖನಿಃ। ಗಂಧೇತಿ ॥ ಲೇಶೇತ್ಯರ್ಥಃ। 'ಗಂಧಃ ಸೌರಭಲೇಶಯೋಃ' ಇತ್ಯಮರಃ।

'ಅವಿದಿತ' ಎಂದರೆ ಶ್ರವಣಾದಿಗಳಿಂದ ಪರೋಕ್ಷಜ್ಞಾನವನ್ನು ಹೊಂದದವನಿಗೆ ಎಂದರ್ಥ. ಹಾಗಾದರೆ ಪರಮಾತ್ಮನನ್ನು ತಿಳಿಯುವುದು ಹೇಗೆ? ಎಂಬ ಪ್ರಶ್ನೆಗೆ 'ಸಕಲಗುಣಾಕರತಯಾ' ಎಂದು ಉತ್ತರಿಸಿದ್ದಾರೆ. ಆಕರಃ = ಆಶ್ರಯನು, ಗಂಧಃ = ಲೇಶ. 'ಗಂಧಃ ಸೌರಭಲೇಶಯೋಃ' ಎಂಬ ಅಮರಕೋಶದಂತೆ ಗಂಧಶಬ್ದಕ್ಕೆ ಸೌರಭ ಹಾಗೂ ಸ್ವಲ್ಪ ಎಂಬೆರೆಡು ಅರ್ಥಗಳು ಇರುತ್ತವೆ.

## ಟೀಕೆಯಲ್ಲಿ 'ಅಶೇಷವೇದ' ಎಂದರು

ಶ್ರೀನಿವಾಸತೀರ್ಥೀಯ –

कर्मकाण्डस्यापीश्वरज्ञानहेतुभूतकर्मप्रतिपादकत्वाद्ब्रह्मण्येव महातात्पर्यमित्याशयेनोक्तम् । **अशेषेति** ।

**ಕರ್ಮಕಾಂಡಸ್ಯಾಪಿ ಈಶ್ವರಜ್ಞಾನಹೇತುಭೂತಕರ್ಮಪ್ರತಿಪಾದಕತ್ವಾತ್ ಬ್ರಹ್ಮಣ್ಯೇವ ಮಹಾತಾತ್ಪರ್ಯಮ್ ಇತ್ಯಾಶಯೇನೋಕ್ತಮ್ – ಅಶೇಷೇತಿ ॥**

ವೇದದ ಕರ್ಮಕಾಂಡವೂ ಸಹ ಪರಮಾತ್ಮನ ಜ್ಞಾನಕ್ಕೆ ಕಾರಣಭೂತವಾದ ಕರ್ಮಗಳನ್ನು ಪ್ರತಿಪಾದಿಸುತ್ತಿದೆ. ಆದ್ದರಿಂದ ಬ್ರಹ್ಮನಲ್ಲಿಯೇ ಮಹಾತಾತ್ಪರ್ಯವನ್ನು ಹೊಂದಿರುತ್ತದೆಂದು ತಿಳಿಯಬೇಕು. ಈ ಅಭಿಪ್ರಾಯದಿಂದ ''ಅಶೇಷ'' ಎಂದು ಹೇಳಿರುತ್ತಾರೆ.

ಶ್ರೀನಿವಾಸತೀರ್ಥೀಯ –

'ब्राह्मणोपनिषन्मन्त्रभेदा वेदगिरोखिला' इत्युक्तेरित्यर्थः ।

**'ಬ್ರಾಹ್ಮಣೋಪನಿಷನ್ಮಂತ್ರಭೇದಾ ವೇದಗಿರೋಽಖಿಲಾಃ' ಇತ್ಯುಕ್ತೇರಿತ್ಯರ್ಥಃ।**

'ಬ್ರಾಹ್ಮಣೋಪನಿಷನ್ಮಂತ್ರಭೇದಾ ವೇದಗಿರೋಽಖಿಲಾಃ' ಬ್ರಾಹ್ಮಣ, ಉಪನಿಷತ್ತು, ಮಂತ್ರ ಎಂಬುದಾಗಿ ವೇದಗಳು ಅನೇಕ ಬಗೆಯಾಗಿವೆ. ಎಲ್ಲಾ ಬಗೆಯ ವೇದಗಳಿಂದಲೂ ಭಗವಂತನೇ ಪ್ರತಿಪಾದ್ಯನಾಗಿದ್ದಾನೆಂದು 'ಅಶೇಷಾಮ್ನಾಯಾಃ' ಎಂಬ ಮಾತುಗಳಿಂದ ತಿಳಿಸಿರುತ್ತಾರೆ.

## ಬ್ರಹ್ಮಸೂತ್ರವು ವೇದಾರ್ಥನಿರ್ಣಯಕ್ಕೆ ಉಪಕರಣ

ಶ್ರೀನಿವಾಸತೀರ್ಥೀಯ –

तर्हि ब्रह्ममीमांसायाः किं कृत्यमित्यत आह – **तदुपकरणेति** ॥

**अर्थनिर्णयेतिकर्तव्यतारूपेत्यर्थः । वेदार्थनिर्णयकरणीभूतन्यायग्रथनात्मकत्वाद्ब्रह्ममीमांसाया इति भावः ।**

**ತರ್ಹಿ ಬ್ರಹ್ಮಮೀಮಾಂಸಾಯಾಃ ಕಿಂ ಕೃತ್ಯಮ್? ಇತ್ಯತ ಆಹ – ತದುಪಕರಣೇತಿ ॥ 'ಅರ್ಥನಿರ್ಣಯೇತಿಕರ್ತವ್ಯತಾರೂಪಾ' ಇತ್ಯರ್ಥಃ । ವೇದಾರ್ಥನಿರ್ಣಯಕರಣೀಭೂತನ್ಯಾಯಗ್ರಥನಾತ್ಮಕತ್ವಾತ್ ಬ್ರಹ್ಮಮೀಮಾಂಸಾಯಾ ಇತಿ ಭಾವಃ ॥**

ವೇದಗಳಿಂದಲೇ ಭಗವಂತನ ಅರಿವು ಪ್ರಾಪ್ತವಾಗುತ್ತಿರುವಾಗ ಬ್ರಹ್ಮಮೀಮಾಂಸಾಶಾಸ್ತ್ರವು ಏಕೆ ಹೊರಡಬೇಕು? ಎಂಬ ಪ್ರಶ್ನೆಗೆ 'ತದುಪಕರಣಭೂತಾ' ಎಂಬ ವಿಶೇಷಣದಿಂದ ಉತ್ತರಿಸಿದ್ದಾರೆ. 'ತದುಪಕರಣಭೂತಾ' ಎಂದರೆ ವೇದದ ಅರ್ಥವನ್ನು ನಿರ್ಣಯಮಾಡಲು ಬ್ರಹ್ಮಮೀಮಾಂಸಾಶಾಸ್ತ್ರಗಳು ಸಹಕಾರಿಯಾಗಿವೆ ಎಂದು ಅಭಿಪ್ರಾಯ. ಏಕೆಂದರೆ ಬ್ರಹ್ಮಮೀಮಾಂಸಾಶಾಸ್ತ್ರವು ವೇದಾಂತನಿರ್ಣಯಕ್ಕೆ ಕರಣವಾಗಿರುವಂತಹ ನ್ಯಾಯಗಳನ್ನು ಪ್ರತಿಸೂತ್ರದಲ್ಲಿಯೂ ಉಲ್ಲೇಖ ಮಾಡುತ್ತಿದೆ. ಇಂತಹ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿರುವ ನ್ಯಾಯಗಳಿಂದ ವೇದಾರ್ಥವು ಸ್ಪಷ್ಟವಾಗಿ ನಿರ್ಣಯವಾಗುತ್ತದೆ.

## ಪೂರ್ವಮೀಮಾಂಸೆಯ ಆಧಾರ

**ಶ್ರೀನಿವಾಸತೀರ್ಥೀಯ –**

**यथाहुः –**

**'धर्मे प्रमीयमाणे हि वेदे न करणात्मना ।**

**इतिकर्तव्यता भागं मीमांसा पूरयिष्यति' इति ।**

**ಯಥಾಹುಃ –**

**'ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ ।**

**ಇತಿಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ ॥' ಇತಿ ।**

ಇದನ್ನೇ ಪೂರ್ವಮೀಮಾಂಸಾಶಾಸ್ತ್ರದಲ್ಲಿ ಹೀಗೆ ಹೇಳಿದ್ದಾರೆ –

'ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ ।
ಇತಿಕರ್ತವ್ಯತಾಭಾಗಂ ಮೀಮಾಂಸಾ ಪೂರಯಿಷ್ಯತಿ ॥' ಎಂದು.

ಧರ್ಮದ ವಿಷಯದಲ್ಲಿ ಯಥಾರ್ಥಜ್ಞಾನವಾಗಬೇಕಾದರೆ ವೇದವು ಕರಣವಾಗುತ್ತದೆ. ಮೀಮಾಂಸಾವು ಸಹಕಾರಿಯಾಗುತ್ತದೆ. ಎಂದು.

## ವಿವರಣೆ–

ಈ ಶ್ಲೋಕವನ್ನು ಪ್ರಕೃತ ಹೀಗೆ ಅರ್ಥೈಸಿಕೊಳ್ಳಬೇಕು –

ಬ್ರಹ್ಮನ ಬಗ್ಗೆ ಯಥಾರ್ಥಜ್ಞಾನವು ಬರಬೇಕೆಂದರೆ, ವೇದವೇ ಮುಖ್ಯಕಾರಣವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರವು ಸಹಕಾರಿಯಾಗಿ ವೇದದಿಂದ ಸ್ಪಷ್ಟವಾದ ಯಥಾರ್ಥಜ್ಞಾನವನ್ನು ತಾಳಲು ಸಹಕಾರಿಯಾಗುತ್ತದೆ – ಎಂದು.

## ವೇದಪ್ರತಿಪಾದ್ಯವು ಸುಳ್ಳಲ್ಲ

ಶ್ರೀನಿವಾಸತೀರ್ಥೀಯ –

**न मायिमत इवायमर्थोऽसत्यः प्रतिपत्तव्य इत्याह – इति परमार्थ इति । सैद्धान्तिकं रहस्यं तत्वमित्यर्थः ।**

**ನ ಮಾಯಿಮತ ಇವ ಅಯಮರ್ಥೋಽಸತ್ಯಃ ಪ್ರತಿಪತ್ತವ್ಯ ಇತ್ಯಾಹ –**
**ಪರಮಾರ್ಥ ಇತಿ ॥ ಸೈದ್ಧಾಂತಿಕಂ ರಹಸ್ಯಂ ತತ್ವಮ್ ಇತ್ಯರ್ಥಃ ।**

ಮಾಯಾವಾದಿಗಳ ಮತದಂತೆ ವೇದಪ್ರತಿಪಾದ್ಯವಾದ ಅರ್ಥವು ಮಿಥ್ಯಾಭೂತವಾದದ್ದು ಎಂದು ತಿಳಿಯಬಾರದು. ಇದನ್ನು ತಿಳಿಸುವುದಕ್ಕಾಗಿಯೇ 'ಇತಿ ಪರಮಾರ್ಥಃ' ಎಂದು ಹೇಳಿರುತ್ತಾರೆ.

'ಪರಮಾರ್ಥಃ' ಎಂದರೆ ಸಿದ್ಧಾಂತದ ರಹಸ್ಯವಾದ ಮುಖ್ಯಪ್ರಮೇಯ ಎಂದರ್ಥ.

## ಮಾಯಾವಾದಖಂಡನದ ಅನಂತರ
## ಉಪಾಧಿಖಂಡನ ಎನ್ನಲು ಒಂದು ಆಧಾರ

ಶ್ರೀನಿವಾಸತೀರ್ಥೀಯ –

**तदुपकरणभूतब्रह्ममीमांसायाश्च प्रवृत्तिरिति तत्वमिति मायावाद-खण्डनोक्तेरित्यवगन्तव्यम् ।।**

**'ತದುಪಕರಣಭೂತಬ್ರಹ್ಮಮೀಮಾಂಸಾಯಾಶ್ಚ ಪ್ರವೃತ್ತಿರಿತಿ ತತ್ವಮ್' ಇತಿ ಮಾಯಾವಾದಖಂಡನೋಕ್ತೇಃ ಇತ್ಯವಗಂತವ್ಯಮ್ ।**

'ತದುಪಕರಣಭೂತಬ್ರಹ್ಮಮೀಮಾಂಸಾಯಾಶ್ಚ ಪ್ರವೃತ್ತಿರಿತಿ ತತ್ವಮ್' ವೇದಕ್ಕೆ ಉಪಕರಣವಾದ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರವೃತ್ತಿಯು ಇದು ತತ್ವ ಎಂಬುದಾಗಿ ಮಾಯಾವಾದಖಂಡನದ ಟೀಕೆಯಲ್ಲಿ ಹೇಳಿದ್ದನ್ನು ಇಲ್ಲಿ ತಿಳಿದುಕೊಳ್ಳಬೇಕು.

### ನೆನಪಿಟ್ಟುಕೊಳ್ಳಿ

ಶ್ರುತಿತನ್ಮೀಮಾಂಸಾಶಾಸ್ತ್ರಗಳಿಗೆ ನಮ್ಮ ಮತದಲ್ಲಿ ಅನುಬಂಧಚತುಷ್ಟಯ ಹೀಗಿದೆ.

**1. ವಿಷಯ –** ಎಲ್ಲಾ ಗುಣಗಳಿಂದ ತುಂಬಿರುವ ಸಮಸ್ತದೋಷಗಳಿಂದ ರಹಿತನಾದ ನಾರಾಯಣನೇ ವೇದ ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರಗಳಿಗೆ ವಿಷಯನು.

**2. ಅಧಿಕಾರಿ** – ಬ್ರಹ್ಮನಿಂದ ಸಂಪೂರ್ಣನಾಗಿ ಭಿನ್ನನಾದ, ದುಃಖಾದ್ಯ- ನರ್ಥಗಳನ್ನು ಕಳೆದುಕೊಳ್ಳಬೇಕೆಂಬ ಇಚ್ಛೆಯನ್ನು ಹೊಂದಿದ ಮೋಕ್ಷವನ್ನು ಬಯಸುವ ಜೀವನು ಅಧಿಕಾರಿ.

**3. ಪ್ರಯೋಜನ** – ಪರಮಾತ್ಮನ ಜ್ಞಾನ ಹಾಗೂ ದುಃಖಾದ್ಯನರ್ಥಗಳ ನಿವೃತ್ತಿರೂಪವಾದ ಸ್ವರೂಪಾನಂದದ ಪ್ರಾಪ್ತಿ ಇವುಗಳೇ ಪ್ರಯೋಜನ.

4. **ಸಂಬಂಧ** – ವಿಷಯಕ್ಕೂ ಅಧಿಕಾರಿಗೂ ಜ್ಞಾತೃಜ್ಞೇಯಭಾವ

ಸಂಬಂಧ; ಅಧಿಕಾರಿಗೂ ಪ್ರಯೋಜನಕ್ಕೂ ಪ್ರಾಪ್ಯಪ್ರಾಪ್ಯಭಾವ ಸಂಬಂಧ; ಪ್ರಯೋಜನಕ್ಕೂ ವಿಷಯಕ್ಕೂ ಪ್ರಾಪ್ಯಪ್ರಾಪಕಭಾವ ಸಂಬಂಧ. ಹೀಗೆ ಯಥಾಯೋಗ್ಯವಾದ ಸಂಬಂಧವು ಇರುತ್ತದೆ.

ಈ ವಿಷಯಾದಿಗಳೇ ಶಾಸ್ತ್ರದ ಏಕದೇಶಸಂಬಂಧಿಯಾದ ಪ್ರಕರಣಗ್ರಂಥಕ್ಕೂ ಕೂಡ ಇರುತ್ತದೆ.

## ಸಾರಾಂಶ

ಗ್ರಂಥವನ್ನು ಅಧ್ಯಯನ ಮಾಡಲು ಹೊರಟಿರುವ ವಿದ್ಯಾರ್ಥಿಗಳು ಟೀಕೆಯ ಸಾರಾಂಶವನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು.

ವೇದಾಧ್ಯಯನದಿಂದಲೇ ಪರಮಾತ್ಮನನ್ನು ತಿಳಿಯಲು ಸಾಧ್ಯ. ವೇದಾರ್ಥವು ಸ್ಪಷ್ಟವಾಗಿ ತಿಳಿಯಬೇಕಾದರೆ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನ ಅನಿವಾರ್ಯ. ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನ ಮಾಡಬೇಕೆಂದರೆ ಈ ಪ್ರಕರಣ ಗ್ರಂಥದ ಅಧ್ಯಯನವು ಅನಿವಾರ್ಯ.

ಅಲ್ಪರಾದ ನಾವೆಲ್ಲರೂ ಶ್ರೇಷ್ಠನಾದ ಪರಮಾತ್ಮನಿಗಿಂತ ಭಿನ್ನರಾಗಿದ್ದೇವೆ. ಸ್ವಾಭಾವಿಕವಾಗಿ ಜ್ಞಾನ, ಆನಂದ ಮೊದಲಾದವುಗಳೇ ಸಾತ್ವಿಕಜೀವರಾಶಿಗಳ ಶರೀರವಾಗಿದೆ. ಆದರೆ ಏನೂ ಕಾರಣವಿಲ್ಲದೆ ಅನಾದಿಕಾಲದಿಂದ ಅಜ್ಞಾನ, ಕಾಮ, ಕರ್ಮಗಳು ಜೀವನಿಗೆ ಅಂಟಿಕೊಂಡು ಸ್ವಾಭಾವಿಕವಾದ ಆನಂದವನ್ನು ಅನುಭವಿಸಲು ಬಿಡುತ್ತಿಲ್ಲ.

ಇಂತಹ ದುಃಖಾದಿ ಅನರ್ಥಗಳನ್ನು ಪರಿಹರಿಸಿಕೊಳ್ಳಬೇಕೆಂದರೆ ಸರ್ವೋತ್ತಮನಾದ ಪರಮಾತ್ಮನನ್ನೇ ಶರಣು ಹೊಂದಬೇಕು. ಅವನ ಪ್ರಸಾದಕ್ಕಾಗಿ ಶ್ರಮಿಸಬೇಕು. ಅವನ ಪ್ರಸಾದವಾಗಬೇಕೆಂದರೆ ಅವನ ಸಾಕ್ಷಾತ್ಕಾರ ಅತ್ಯಂತ ಅನಿವಾರ್ಯ. ಅವನ ಸಾಕ್ಷಾತ್ಕಾರಕ್ಕಾಗಿ ಶಾಸ್ತ್ರಗ್ರಂಥಗಳಿಂದ ಮೊದಲು ಪರೋಕ್ಷಜ್ಞಾನವನ್ನು ಪಡೆಯಬೇಕು. ಪರೋಕ್ಷಜ್ಞಾನವನ್ನು ಪಡೆಯಬೇಕೆಂದರೆ ಶಾಸ್ತ್ರಗ್ರಂಥಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಬೇಕು. 'ಪರಮಾತ್ಮನು ಸಕಲಗುಣಗಳಿಂದ ಪರಿಪೂರ್ಣನಾಗಿದ್ದಾನೆ, ಸಕಲದೋಷಗಳಿಂದ ರಹಿತನಾಗಿ-

ದ್ದಾನೆ ಎಂದು ದೃಢಪಡಿಸಿಕೊಳ್ಳಬೇಕು. ಇದಕ್ಕಾಗಿಯೇ ಸಮಸ್ತ ವೇದಗಳ ಪ್ರವೃತ್ತಿ. ಈ ವೇದಾರ್ಥನಿರ್ಣಯಕ್ಕೋಸ್ಕರ ಬ್ರಹ್ಮಮೀಮಾಂಸಾದಿಶಾಸ್ತ್ರಗಳು ಹೊರಟಿರುತ್ತವೆ. ಅದಕ್ಕೆ ಪೂರಕವಾಗಿ ಇಂತಹ ಪ್ರಕರಣಗ್ರಂಥಗಳು ಹೊರಟಿರುತ್ತವೆ.

## ಪ್ರಶ್ನೆಗಳಿಗೆ ಉತ್ತರಿಸಿ.

1. ಉಪಾಧಿಖಂಡನ ಎಂಬ ಗ್ರಂಥಕ್ಕೆ ಎಷ್ಟು ಹೆಸರುಗಳಿವೆ? ಅವು ಯಾವುದು?

2. ಉಪಾಧಿಖಂಡನ ಎಂಬ ಪ್ರಕರಣಗ್ರಂಥವು ಏಕೆ ಹೊರಟಿದೆ?

3. ವೇದಾಧ್ಯಯನ ಏಕೆ ಅನಿವಾರ್ಯ?

4. ಬ್ರಹ್ಮಮೀಮಾಂಸಾಶಾಸ್ತ್ರವೆಂದರೆ ಯಾವುದು? ಮತ್ತು ಅದನ್ನು ಏಕೆ ಓದಬೇಕು?

5. ಜೀವ ಎಂದರೆ ಯಾರು? ಪರಮಾತ್ಮ ಎಂದರೆ ಯಾರು?

6. ಭಾವರೂಪ ಅಜ್ಞಾನವೆಂದರೇನು?

7. ಜೀವಪರಮಾತ್ಮರಿಗೆ ಭೇದವನ್ನು, ಅಭೇದವನ್ನು ಮತ್ತು ಭೇದಾಭೇದವನ್ನು ಒಪ್ಪುವ ದಾರ್ಶನಿಕರನ್ನು ಹೆಸರಿಸಿ.

8. ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಹೇಗೆ ಶ್ರಮಿಸಬೇಕು?

9. ಪರಮಾತ್ಮನ ಸಾಕ್ಷಾತ್ಕಾರವನ್ನು ಶಾಸ್ತ್ರಾಧ್ಯಯನವಿಲ್ಲದೆ ಪಡೆಯಬಹುದೇ?

10. ಗ್ರಂಥಕ್ಕೆ ಅವತಾರಿಕೆ ನೀಡುವ ಈ ಮೂಲದಿಂದ ನೀವು ತಿಳಿದ ಮುಖ್ಯವಿಷಯವೇನು?

* ಈ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ತಿಳಿಯದಿದ್ದರೆ ಮತ್ತೊಮ್ಮೆ ಓದಿರಿ *

## ಮಾಯಾವಾದಿಗಳಿಗೆ ಅಭಿಪ್ರೇತವಾದ ವಿಷಯಾದಿಗಳ ನಿರೂಪಣೆ

ಟೀಕಾ –

अपरे तु स्वतः परमात्मभूतस्यैव जीवस्य अज्ञानादि-निमित्तोयमपरमार्थ एवानर्थोऽद्वैतज्ञानैकनिबर्हणीय इत्य-तोऽस्यानर्थहेतोः प्रहाणाय आत्मैकत्वविद्याप्रतिपत्तये सर्वे वेदान्ता आरभ्यन्ते । तदितिकर्तव्यतारूपा ब्रह्म-मीमांसा चेति मन्यन्ते ।

ಅಪರೇ ತು – ಸ್ವತಃ ಪರಮಾತ್ಮಭೂತಸ್ಯೈವ ಜೀವಸ್ಯ ಅಜ್ಞಾನಾದಿ ನಿಮಿತ್ತೋಯಮ್ ಅಪರಮಾರ್ಥ ಏವಾನರ್ಥಃ, ಅದ್ವೈತಜ್ಞಾನೈಕ-ನಿಬರ್ಹಣೀಯ ಇತ್ಯತೋ ಅಸ್ಯಾನರ್ಥಹೇತೋಃ ಪ್ರಹಾಣಾಯ ಆತ್ಮೈಕತ್ವವಿದ್ಯಾಪ್ರತಿಪತ್ತಯೇ ಸರ್ವೇ ವೇದಾಂತಾ ಆರಭ್ಯಂತೇ । ತದಿತಿಕರ್ತವ್ಯತಾರೂಪಾ ಬ್ರಹ್ಮಮೀಮಾಂಸಾ ಚ – ಇತಿ ಮನ್ಯಂತೇ।

ಮಾಯಾವಾದಿಗಳು ವಿಷಯ,ಪ್ರಯೋಜನಾದಿಗಳನ್ನು ಹೀಗೆ ಹೇಳು-ತ್ತಾರೆ –

ಜೀವನು ಪರಮಾತ್ಮನಿಂದ ಭಿನ್ನನಲ್ಲ. ಪರಮಾತ್ಮನ ಜೊತೆ ಐಕ್ಯವನ್ನು ಹೊಂದಿರುವಿಕೆಯೇ ಜೀವನ ಸ್ವರೂಪವಾಗಿದೆ. ಅನಾದಿಕಾಲದಿಂದ ಅಂಟಿ-ಕೊಂಡಿರುವ ಅಜ್ಞಾನವು ಜೀವಬ್ರಹ್ಮೈಕ್ಯಜ್ಞಾನಕ್ಕೆ ಪ್ರತಿಬಂಧಕವಾಗಿದೆ. ಆದ್ದ-ರಿಂದ ಜೀವಬ್ರಹ್ಮರಿಗೆ ಐಕ್ಯವಿದ್ದರೂ ಅದು ನಮಗೆ ಗೋಚರವಾಗುವುದಿಲ್ಲ.

ಸುಖದುಃಖಾದಿಗಳನ್ನು ಅನುಭವಿಸುತ್ತಾ ಸಂಸಾರವೆಂಬ ಅನರ್ಥವು ಯಥಾರ್ಥವಲ್ಲ. ಅಜ್ಞಾನದಿಂದ ಜೀವನಲ್ಲಿ ಅವುಗಳು ಕೇವಲ ತೋರುತ್ತವೆ. ಯಾವಾಗ ಜೀವರಿಗೆ ಅಜ್ಞಾನವು ಹೊರಟುಹೋಗಿ ಅಜ್ಞಾನನಿಮಿತ್ತಕವಾದ

**ಸುಃಖದುಃಖಾದಿಗಳು ಸಹ ದೂರವಾಗುತ್ತವೆ. ಇಂತಹ ಆತ್ಮೈಕ್ಯಜ್ಞಾನವನ್ನು ಜೀವನು ಅವಶ್ಯವಾಗಿ ಪಡೆಯಬೇಕೆಂದು ತಿಳಿಸುವುದಕ್ಕಾಗಿಯೇ ಸಕಲ ವೇದಾಂತಗಳೂ, ಆ ವೇದಾಂತಗಳಿಗೆ ಸಹಕಾರಿಯಾದ ಬ್ರಹ್ಮಮೀಮಾಂಸಾ-ಶಾಸ್ತ್ರವು ಹೊರಟಿದೆ.**

**ಟೀಕೆಯ ಅರ್ಥ** – ಅಪರೇ ತು = ಮಾಯಾವಾದಿಗಳಾದರೂ ಸಹ, ಸ್ವತಃ = ಸ್ವಾಭಾವಿಕವಾಗಿ, ಪರಮಾತ್ಮಭೂತಸ್ಯೈವ = ಪರಮಾತ್ಮನ ಸ್ವರೂಪನೇ ಆದ, ಜೀವಸ್ಯ = ಜೀವನಿಗೆ, ಅಜ್ಞಾನಾದಿನಿಮಿತ್ತಃ = ಅಜ್ಞಾನವೇ ಉಪಾದಾನಕಾರಣವಾಗಿ ಉಳ್ಳ, ಅಯಂ = ನಿತ್ಯವಾಗಿ ಅನುಭವಿಸುತ್ತಿರುವ, ಅಪರಮಾರ್ಥಃ ಏವ = ಸ್ವಾಭಾವಿಕವಲ್ಲದ, ಅನರ್ಥಃ = ದುಃಖಾದಿಗಳು, ಅದ್ವೈತಜ್ಞಾನೈಕನಿಬರ್ಹಣೀಯಃ = ಜೀವಬ್ರಹ್ಮೈಕ್ಯಜ್ಞಾನದಿಂದಷ್ಟೇ ಪರಿಹಾರವಾಗುತ್ತವೆ. ಇತ್ಯತಃ = ಈ ಕಾರಣದಿಂದ, ಅಸ್ಯ = ಈ ಅಜ್ಞಾನಕ್ಕೆ, ಅನರ್ಥಹೇತೋಃ = ದುಃಖಾದಿಗಳಿಗೆ ಉಪಾದಾನಕಾರಣವಾಗಿರುವಿಕೆಯನ್ನು, ಪ್ರಹಾಣಾಯ = ನಾಶ ಮಾಡುವುದಕ್ಕಾಗಿ, ಆತ್ಮೈಕತ್ವವಿದ್ಯಾಪ್ರತಿಪತ್ತಯೇ = ಜೀವಬ್ರಹ್ಮೈಕ್ಯಜ್ಞಾನವನ್ನು ಪಡೆಯು-ವುದಕ್ಕಾಗಿಯೇ, ಸರ್ವೇ = ಸಕಲವಿಧವಾದ, ವೇದಾಂತಾಃ = ವೇದೋಪನಿಷತ್ತುಗಳೆಲ್ಲವೂ, ಆರಭ್ಯಂತೇ = ಹೊರಟಿರುತ್ತವೆ. ತದಿತಿಕರ್ತವ್ಯತಾರೂಪಾ = ವೇದೋಪನಿಷತ್ತುಗಳಿಗೆ ಸಹಕಾರಿಯಾದ, ಬ್ರಹ್ಮಮೀಮಾಂಸಾ ಚ = ಬ್ರಹ್ಮಮೀಮಾಂಸಾಶಾಸ್ತ್ರವೂ ಕೂಡ (ಹೊರಟಿ-ರುತ್ತದೆ), ಇತಿ = ಹೀಗೆ, ಮನ್ಯಂತೇ = ತಿಳಿಯುತ್ತಾರೆ.

## ವಿಷಯಾದ್ಯಾಭಾಸಗಳು

**ಮಂದಾರಮಂಜರೀ–**

वेदान्तानां विषयादितत्वनिर्णयार्थं चैतत्प्रकरणम् । किं विषयाद्याभासप्रसक्तिरस्ति? इत्याशङ्क्य अस्तीत्याह – **अपरे त्वित्यादिना मन्यन्त** इत्यन्तेन ग्रन्थेन ।।

**ವೇದಾಂತಾನಾಂ ವಿಷಯಾದಿತತ್ವನಿರ್ಣಯಾರ್ಥಂ ಚೈತತ್ ಪ್ರಕರಣಮ್। ಕಿಂ ವಿಷಯಾದ್ಯಾಭಾಸಪ್ರಸಕ್ತಿರಸ್ತಿ? ಇತ್ಯಾಶಂಕ್ಯ ಅಸ್ತೀತ್ಯಾಹ –**

'ಅಪರೇ ತು' ಇತ್ಯಾದಿನಾ 'ಮನ್ಯಂತೇ' ಇತ್ಯಂತೇನ ಗ್ರಂಥೇನ।

ವೇದಾಂತಗಳ ವಿಷಯಪ್ರಯೋಜನಾದಿಗಳನ್ನು ನಿರ್ಣಯ ಮಾಡಲು ಈ ಪ್ರಕರಣ ಹೊರಟಿದೆ. ಆದರೆ ವಿಷಯಾಭಾಸ, ಪ್ರಯೋಜನಾಭಾಸ ಇವುಗಳ ಪ್ರಸಕ್ತಿ ಇದ್ದರೆ ಮಾತ್ರ ವೇದಾಂತಗಳಿಗೆ ವಿಷಯ, ಪ್ರಯೋಜನಾದಿಗಳನ್ನು ಸಮರ್ಥಿಸಬೇಕಾಗುತ್ತದೆ. ಆದರೆ ವಿಷಯಾದ್ಯಾಭಾಸಗಳ ಪ್ರಸಕ್ತಿ ಇದೆಯೇನು? ಎಂದು ಶಂಕಿಸಿದರೆ, 'ಹೌದು; ಇದೆ' ಎಂದು ಹೇಳುತ್ತಿದ್ದಾರೆ. ಅದ್ವೈತಿಗಳು ಹೇಳುವ ವಿಷಯಾದ್ಯಾಭಾಸವನ್ನು ಕೇಳಿದಾಗ ಶಿಷ್ಯಂದಿರಿಗೆ ಇವುಗಳೇ ವಿಷಯಾದಿಗಳೆಂದು ತಿಳಿಯುತ್ತದೆ. ಶಿಷ್ಯರಿಗೆ ಬರುವಂತಹ ಭ್ರಾಂತಿಯನ್ನು ಪರಿಹರಿಸುವುದಕ್ಕಾಗಿ ಅದ್ವೈತಿಗಳು ಹೇಳುವ ವಿಷಯಾದ್ಯಾಭಾಸಗಳನ್ನು ತೋರಿಸುತ್ತಿದ್ದಾರೆ. ''ಅಪರೇ ತು'' ಎಂಬಲ್ಲಿಂದ ಪ್ರಾರಂಭಿಸಿ ''ಮನ್ಯಂತೇ'' ಎಂಬಲ್ಲಿಯ ತನಕ.

## ಐಕ್ಯವಿದ್ಯೆಯ ಪ್ರಯೋಜನ

ಮಂದಾರಮಂಜರೀ–

वेदान्तस्य प्रयोजनमात्मैकत्वविद्येत्याह – **आत्मैकत्वविद्येति** ।। प्रतिपत्तिशब्देन प्राप्तिर्विवक्ष्यते । आत्मैकत्वविद्यायाः प्रयोजनमाह – **अनर्थहेतोः प्रहाणाय इति** ।।

'ವೇದಾಂತಸ್ಯ ಪ್ರಯೋಜನಮ್ ಆತ್ಮೈಕತ್ವವಿದ್ಯಾ' ಇತ್ಯಾಹ – ಆತ್ಮೈಕತ್ವವಿದ್ಯೇತಿ ॥ ಪ್ರತಿಪತ್ತಿಶಬ್ದೇನ ಪ್ರಾಪ್ತಿರ್ವಿವಕ್ಷ್ಯತೇ। ಆತ್ಮೈಕತ್ವವಿದ್ಯಾಯಾಃ ಪ್ರಯೋಜನಮಾಹ – ಅನರ್ಥಹೇತೋಃ ಪ್ರಹಾಣಾಯ ಇತಿ ॥

ವೇದಾಂತಗಳಿಗೆ ಆತ್ಮೈಕತ್ವವಿದ್ಯೆಯೇ ಪ್ರಯೋಜನವೆಂದು 'ಆತ್ಮೈಕತ್ವವಿದ್ಯಾ' ಎಂಬುದರಿಂದ ಹೇಳುತ್ತಿದ್ದಾರೆ. ಪ್ರತಿಪತ್ತಿ ಎಂದರೆ ಹೊಂದುವು-

ದಕ್ಕಾಗಿ ಎಂದರ್ಥ. ಆತ್ಮೈಕತ್ವವಿದ್ಯೆಗೆ ಪ್ರಯೋಜನವನ್ನು 'ಅನರ್ಥಹೇತೋಃ ಪ್ರಹಾಣಾಯ' ಎಂಬುದರಿಂದ ಉತ್ತರಿಸಿದ್ದಾರೆ.

## ಅಜ್ಞಾನವು ಪರಿಹಾರವಾಗಬೇಕು

ಮಂದಾರಮಂಜರೀ–

यद्वा वेदान्तानामात्मैकत्वं विषय इत्याह – **आत्मैकत्वविद्येति** ।। प्रतिपत्तिशब्देन प्राप्तिर्विवक्ष्यते । यद्धि यत्प्रतिपत्त्यर्थं स तस्य विषय इति प्रसिद्धम् । प्रयोजनमाह – **अनर्थहेतोः प्रहाणाय इति** ।। इत्यनर्थ-निबर्हणार्थमिति शेषः ।

**ಯದ್ವಾ ವೇದಾಂತಾನಾಮ್ ಆತ್ಮೈಕತ್ವಂ ವಿಷಯಃ ಇತ್ಯಾಹ – ಆತ್ಮೈಕತ್ವ-ವಿದ್ಯಾ ಇತಿ ॥ 'ಪ್ರತಿಪತ್ತಿ'ಶಬ್ದೇನ ಪ್ರಾಪ್ತಿರ್ವಿವಕ್ಷ್ಯತೇ । 'ಯದ್ಧಿ ಯತ್ಪ್ರತಿ-ಪತ್ತ್ಯರ್ಥಂ ಸ ತಸ್ಯ ವಿಷಯಃ' ಇತಿ ಪ್ರಸಿದ್ಧಮ್ । ಪ್ರಯೋಜನಮಾಹ – ಅನರ್ಥಹೇತೋಃ ಪ್ರಹಾಣಾಯ ಇತಿ ॥ 'ಇತ್ಯನರ್ಥನಿಬರ್ಹಣಾರ್ಥಮ್' ಇತಿ ಶೇಷಃ ॥**

ಅಥವಾ 'ಅದ್ವೈತಜ್ಞಾನೈಕನಿಬರ್ಹಣೀಯಃ' ಎಂಬ ವಾಕ್ಯಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಿಸಬಹುದು. ವೇದಾಂತಗಳಿಗೆ ಆತ್ಮೈಕ್ಯವೇ ವಿಷಯ-ವಾಗಿದೆಯೆಂದು 'ಆತ್ಮೈಕತ್ವವಿದ್ಯಾ' ಎಂಬುದರಿಂದ ಹೇಳಿದ್ದಾರೆ. 'ಪ್ರತಿಪತ್ತಿ' ಶಬ್ದಕ್ಕೆ ಪ್ರಾಪ್ತಿ ಎಂದರ್ಥ. 'ಯಾವ ಗ್ರಂಥವು ಏನನ್ನು ತಿಳಿಸಲು ಹೊರಟಿ-ರುತ್ತದೋ ಆ ಗ್ರಂಥಕ್ಕೆ ಅದೇ ವಿಷಯವಾಗಿರುತ್ತದೆ' ಎಂಬುದು ಪ್ರಸಿದ್ಧ-ವಾಗಿದೆ. ವೇದಾಂತಗಳು ಐಕ್ಯಜ್ಞಾನದ ಪ್ರಯೋಜನಕ್ಕೋಸ್ಕರ ಹೊರಟಿರು-ವುದರಿಂದ ಅವುಗಳಿಗೆ ಜೀವಬ್ರಹ್ಮೈಕ್ಯವೇ ವಿಷಯವೆಂದು ಹೇಳಿದಂತಾಯಿತು. ವೇದಾಂತಗಳಿಗೆ ಪ್ರಯೋಜನವನ್ನು ಹೇಳಲು 'ಅನರ್ಥಹೇತೋಃ ಪ್ರಹಾ-

ಣಾಯ' ಎಂದು ಹೇಳಿದ್ದಾರೆ. ಅನರ್ಥವೆನಿಸಿದ ದುಃಖಾದಿಗಳು ಪರಿಹಾರವಾಗಬೇಕಾದರೆ ದುಃಖಾದ್ಯನರ್ಥಗಳಿಗೆ ಹೇತುಭೂತವಾದ ಅಜ್ಞಾನವು ಪರಿಹಾರವಾಗಬೇಕು.

## ದುಃಖಾದಿಗಳ ಪರಿಹಾರಕ್ಕಾಗಿ

ಮಂದಾರಮಂಜರೀ–

अनर्थस्याद्वैतज्ञाननिवर्त्यत्वे हेतुमाह – **अपरमार्थ इति** ।। अपरमार्थत्वे हेतुमाह – **अज्ञानादिनिमित्त इति** ।। निमित्तशब्दः कारणमात्रवाची तद्विशेषोपादाने पर्यवस्यतीति द्रष्टव्यम् ।

ಅನರ್ಥಸ್ಯ ಅದ್ವೈತಜ್ಞಾನನಿವರ್ತ್ಯತ್ವೇ ಹೇತುಮಾಹ – ಅಪರಮಾರ್ಥ ಇತಿ ॥ ಅಪರಮಾರ್ಥತ್ವೇ ಹೇತುಮಾಹ – ಅಜ್ಞಾನಾದಿನಿಮಿತ್ತ ಇತಿ ॥ 'ನಿಮಿತ್ತ'ಶಬ್ದಃ ಕಾರಣಮಾತ್ರವಾಚೀ, ತದ್ವಿಶೇಷೋಪಾದಾನೇ ಪರ್ಯವಸ್ಯತೀತಿ ದ್ರಷ್ಟವ್ಯಮ್ ।

ಅನರ್ಥವೆನಿಸಿದ ದುಃಖಾದಿಗಳು ಐಕ್ಯಜ್ಞಾನದಿಂದ ಪರಿಹಾರವಾಗುತ್ತವೆ ಎನ್ನಲು ಕಾರಣವನ್ನು 'ಅಪರಮಾರ್ಥಃ' ಎಂಬುದರಿಂದ ಹೇಳಿದ್ದಾರೆ. ಅಪಾರಮಾರ್ಥಿಕವೆಂದು ತಿಳಿದಾಗ ದುಃಖಾದಿಗಳು ಪರಿಹಾರವಾಗುತ್ತದೆಂದು ಅಭಿಪ್ರಾಯ. ದುಃಖಾದಿಗಳು ಏಕೆ ಅಪಾರಮಾರ್ಥಿಕ? ಎಂಬುದಕ್ಕೆ ಕಾರಣವನ್ನು ಹೇಳಲು 'ಅಜ್ಞಾನಾದಿನಿಮಿತ್ತಃ' ಎಂದು ಹೇಳಿದ್ದಾರೆ. 'ಅಜ್ಞಾನಾದಿನಿಮಿತ್ತಃ' ಎಂಬಲ್ಲಿರುವ ನಿಮಿತ್ತಶಬ್ದಕ್ಕೆ ಕೇವಲ ಕಾರಣವೆಂಬರ್ಥವನ್ನು ತಿಳಿಯಬೇಕು. ಅನಂತರ ಕಾರಣವಿಶೇಷವಾದ ಉಪಾದಾನ ಎಂಬರ್ಥದಲ್ಲಿ ನಿಮಿತ್ತಶಬ್ದವು ತಾತ್ಪರ್ಯತಃ ಪರ್ಯವಸಾನವಾಗುತ್ತದೆ.

## ಜೀವನು ಪರಮಾತ್ಮನೇ !

ಮಂದಾರಮಂಜರೀ–

तत्र हेतुमाह – **स्वतः परमात्मभूतस्येति** ।। ननु स्वतः परमात्माभिन्ने जीवे स्वाभाविकानर्थ इव अज्ञाननिमित्तकोऽपि न सम्भवतीत्यत आह – **अयमिति** ।।

**ತತ್ರ ಹೇತುಮಾಹ – ಸ್ವತಃ ಪರಮಾತ್ಮಭೂತಸ್ಯೇತಿ ॥ ನನು ಸ್ವತಃ ಪರಮಾತ್ಮಾಭಿನ್ನೇ ಜೀವೇ ಸ್ವಾಭಾವಿಕಾನರ್ಥ ಇವ ಅಜ್ಞಾನನಿಮಿತ್ತಕೋಽಪಿ ನ ಸಂಭವತೀತ್ಯತ ಆಹ – ಅಯಮಿತಿ ॥**

ಅಜ್ಞಾನನಿಮಿತ್ತಕವೆಂದು ಮತ್ತು ಮಿಥ್ಯಾಭೂತವೆಂದೂ ಏಕೆ ಹೇಳಬೇಕು? ಎಂದರೆ 'ಸ್ವತಃ ಪರಮಾತ್ಮಭೂತಸ್ಯ' ಎಂದು ಉತ್ತರಿಸಿದ್ದಾರೆ. ಜೀವನು ಸ್ವಾಭಾವಿಕವಾಗಿ ಪರಮಾತ್ಮನಾಗಿರುವುದರಿಂದ ದುಃಖಾದಿಗಳೆಲ್ಲವೂ ಮಿಥ್ಯಾಭೂತವಾಗಿದೆಯೆಂದು ಅಭಿಪ್ರಾಯ. ಸ್ವಾಭಾವಿಕವಾಗಿ ಜೀವನು ಪರಮಾತ್ಮನಿಗಿಂತ ಅಭಿನ್ನನಾದ ಮೇಲೆ ಜೀವನಲ್ಲಿ ಸ್ವಾಭಾವಿಕವಾಗಿಯೇ ದುಃಖಾದ್ಯನರ್ಥಗಳು ಹೇಗೆ ಬರುವುದಿಲ್ಲವೋ ಹಾಗೆ ಅಜ್ಞಾನನಿಮಿತ್ತವೂ ಕೂಡ ಸ್ವಾಭಾವಿಕವಾಗಿ ಬರುವುದಿಲ್ಲವಲ್ಲಾ? ಎಂಬ ಪ್ರಶ್ನೆಗೆ ''ಅಯಂ'' ಎಂದು ಉತ್ತರಿಸಿದ್ದಾರೆ.

## ಅನರ್ಥ ಪ್ರತ್ಯಕ್ಷಸಿದ್ಧ

ಮಂದಾರಮಂಜರೀ–

युक्त्यसहत्वमनर्थस्य भूषणम् । प्रतीतिमात्रं तु प्रत्यक्षसिद्धत्वान्नापलापार्हमिति भावः।

ಯುಕ್ತ್ಯಸಹತ್ವಮ್ ಅನರ್ಥಸ್ಯ ಭೂಷಣಮ್ । ಪ್ರತೀತಿಮಾತ್ರಂ ತು ಪ್ರತ್ಯಕ್ಷಸಿದ್ಧತ್ವಾತ್ ನಾಪಲಾಪಾರ್ಹಮಿತಿ ಭಾವಃ।

ಸ್ವತಃ ಪರಮಾತ್ಮಭೂತನಾದ ಜೀವನಿಗೆ ದುಃಖಾದ್ಯನರ್ಥಗಳು ಬರಲು ಹೇಗೆ ಸಾಧ್ಯ? 'ಜೀವಃ ಮಿಥ್ಯಾಭೂತದುಃಖವಾನ್ ನ ಭವತಿ ಸ್ವತಃ ಬ್ರಹ್ಮಭೂತತ್ವಾತ್ ಬ್ರಹ್ಮವತ್' ಇವೇ ಮೊದಲಾದ ಯುಕ್ತಿಗಳಿಂದ ವಿರೋಧ ಬರುತ್ತದೆಯಲ್ಲವೇ? ಎಂದರೆ ಯುಕ್ತ್ಯಸಹತ್ವವು ಅನರ್ಥಕ್ಕೆ ಭೂಷಣವೇ ಆಗಿದೆ. ಆದರೆ ನಮಗೆ ಪ್ರತೀತವಾಗುತ್ತಿರುವ ದುಃಖಾದಿಗಳು ಪ್ರತ್ಯಕ್ಷಸಿದ್ಧ-ವಾಗಿರುವುದರಿಂದ ಅಪಲಾಪ ಮಾಡಲು ಸಾಧ್ಯವಿಲ್ಲ.

## ದುಃಖಕ್ಕೆ ಜ್ಞಾನವು ನಿವರ್ತಕವೇ?

ಮಂದಾರಮಂಜರೀ–

ननु ज्ञानस्याज्ञानमात्रनिवर्तकत्वान्न दुःखादिनिवर्तकत्वं, तत्राह ।। **अस्य प्रहाणायेति ।। अस्ये**त्यज्ञानस्येत्यर्थः ।

ನನು ಜ್ಞಾನಸ್ಯಾಜ್ಞಾನಮಾತ್ರನಿವರ್ತಕತ್ವಾನ್ನ ದುಃಖಾದಿನಿವರ್ತಕತ್ವಂ, ತತ್ರಾಹ – ಅಸ್ಯ ಪ್ರಹಾಣಾಯೇತಿ ॥ ಅಸ್ಯ ಇತಿ ಅಜ್ಞಾನಸ್ಯೇತ್ಯರ್ಥಃ।

ಜ್ಞಾನವು ಅಜ್ಞಾನಕ್ಕೆ ಮಾತ್ರ ನಿವರ್ತಕವಾಗಿದೆ. ಹೀಗಿರುವಾಗ ದುಃಖಾದಿ-ಗಳಿಗೆ ಜ್ಞಾನವು ನಿವರ್ತಕವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಅಸ್ಯ ಪ್ರಹಾಣಾಯ' ಎಂದು ಉತ್ತರಿಸಿದ್ದಾರೆ. 'ಅಸ್ಯ' ಎಂದರೆ ಅಜ್ಞಾನಕ್ಕೆ ಎಂದರ್ಥ.

## ಪರಂಪರೆಯಿಂದ ನಿವರ್ತಕ

ಮಂದಾರಮಂಜರೀ–

साक्षादनर्थनिवृत्तिहेतुत्वाभावेऽपि अनर्थहेत्वज्ञाननिवृत्त्यर्थमात्मैकत्व

-विद्येत्यर्थः । अविद्यानिवृत्तेः कथमनर्थनिवृत्तिहेतुत्वम्? तत्राह –**अनर्थ-हेतोरिति** ।। अनर्थोपादनस्येत्यर्थः । उपादाननिवृत्तेरुपादेयनिवृत्तिहेतुत्वं सुप्रसिद्धमिति भावः ।

ಸಾಕ್ಷಾದನರ್ಥನಿವೃತ್ತಿಹೇತುತ್ವಾಭಾವೇऽಪಿ ಅನರ್ಥಹೇತ್ವಜ್ಞಾನನಿವೃತ್ತ್ಯರ್ಥಮ್ ಆತ್ಮೈಕತ್ವವಿದ್ಯಾ ಇತ್ಯರ್ಥಃ। ಅವಿದ್ಯಾನಿವೃತ್ತೇಃ ಕಥಮನರ್ಥನಿವೃತ್ತಿಹೇತುತ್ವಮ್? ತತ್ರಾಹ – ಅನರ್ಥಹೇತೋರಿತಿ ॥ ಅನರ್ಥೋಪಾದಾನಸ್ಯ ಇತ್ಯರ್ಥಃ । ಉಪಾದಾನನಿವೃತ್ತೇರುಪಾದೇಯನಿವೃತ್ತಿಹೇತುತ್ವಂ ಸುಪ್ರಸಿದ್ಧಮಿತಿ ಭಾವಃ।

ಜ್ಞಾನವು ನೇರವಾಗಿ ದುಃಖಾದಿಗಳ ನಿವೃತ್ತಿಗೆ ಕಾರಣವಾಗದಿದ್ದರೂ ಅವುಗಳಿಗೆ ಕಾರಣವಾದ ಅಜ್ಞಾನವನ್ನು ನಿವೃತ್ತಿ ಮಾಡುವ ಮೂಲಕ ಕಾರಣ-ವಾಗಿದೆ ಎಂದು ತಿಳಿಯಬೇಕು. ಜ್ಞಾನದಿಂದ ಅಜ್ಞಾನವು ನಿವೃತ್ತವಾದ ಮೇಲೆ ದುಃಖಾದಿಗಳೇಕೆ ನಿವೃತ್ತವಾಗಬೇಕು? ಎಂಬ ಪ್ರಶ್ನೆಗೆ 'ಅನರ್ಥಹೇತೋಃ' ಎಂದು ಉತ್ತರಿಸಿದ್ದಾರೆ. ಅನರ್ಥಕ್ಕೆ ಉಪಾದಾನಕಾರಣವಾದದ್ದರಿಂದ ಎಂದರ್ಥ. ಉಪಾದಾನನಾಶವು ಉಪಾದೇಯನಾಶಕ್ಕೆ ಕಾರಣವಾಗಿರುತ್ತದೆ. ತಂತು ನಾಶದಿಂದ ಪಟನಾಶವಾದಂತೆ ಪ್ರಕೃತ ಐಕ್ಯಜ್ಞಾನವು ಅಜ್ಞಾನಕ್ಕೆ ಉಪಾದಾನವನ್ನು ನಾಶಮಾಡುತ್ತದೆಂದರೆ, ಉಪಾದೇಯವಾದ ದುಃಖಾದಿ-ಗಳನ್ನೂ ಸಹ ನಾಶಮಾಡುತ್ತದೆಂದೇ ಹೇಳಿದಂತಾಯಿತು.

## ವಿಷಯಾದಿಗಳ ಪ್ರಸಕ್ತಿ ಮತ್ತೊಂದು ರೀತಿ

ಶ್ರೀನಿವಾಸತೀರ್ಥೀಯ –

**ननु प्रकारान्तरेण विषयादि प्रसक्तेरेवाभावाद्वेदतन्मीमांसा-शास्त्रयोर्विषयादितत्वनिर्णयार्थमिदं प्रकरणमित्ययुक्तमित्यतः प्रकारा-न्तरेण विषयादिप्रसक्तिं दर्शयति – अपरे त्विति ।**

**ನನು ಪ್ರಕಾರಾಂತರೇಣ ವಿಷಯಾದಿಪ್ರಸಕ್ತೇರೇವ ಅಭಾವಾತ್ ವೇದ ತನ್ಮೀಮಾಂಸಾಶಾಸ್ತ್ರಯೋಃ ವಿಷಯಾದಿತತ್ವನಿರ್ಣಯಾರ್ಥಮಿದಂ ಪ್ರಕರಣಮ್ ಇತ್ಯಯುಕ್ತಮ್, ಇತ್ಯತಃ ಪ್ರಕಾರಾಂತರೇಣ ವಿಷಯಾದಿಪ್ರಸಕ್ತಿಂ ದರ್ಶಯತಿ – ಅಪರೇ ತ್ವಿತಿ ॥**

ಸಿದ್ಧಾಂತದ ಪ್ರಕಾರ ವಿಷಯಪ್ರಯೋಜನಾದಿಗಳನ್ನು ಈ ಗ್ರಂಥಕ್ಕೆ ತಿಳಿದಿದ್ದಾಯಿತು. ಬೇರೆ ಪ್ರಕಾರದಲ್ಲಿ ವಿಷಯಾದಿಗಳನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ವೇದ ಹಾಗೂ ವೇದಾಂತನಿರ್ಣಾಯಕವಾದ ಬ್ರಹ್ಮಮೀಮಾಂಸಾಶಾಸ್ತ್ರಗಳ ವಿಷಯಾದಿಗಳನ್ನು ನಿರ್ಣಯಿಸುವುದಕ್ಕಾಗಿ ಈ ಗ್ರಂಥವು ಹೊರಟಿರುತ್ತದೆಂದು ಹೇಳಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಪ್ರಕಾರದಲ್ಲಿ ವಿಷಯಪ್ರಯೋಜನಾದಿಗಳಿಗೆ ಪ್ರಸಕ್ತಿ ಇದೆಯೆಂದು ತೋರಿಸುತ್ತಾರೆ ''ಅಪರೇ ತು'' ಇತ್ಯಾದಿ ಗ್ರಂಥದಿಂದ.

## ದುಃಖಾದಿಗಳಿಗೆ ಉಪಾದಾನ ಅಜ್ಞಾನ

**ಶ್ರೀನಿವಾಸತೀರ್ಥೀಯ –**

वेदान्तानामात्मैकत्वं विषय इत्याह – **आत्मैकत्वविद्याप्रतिपत्तय इति** । **प्रतिपत्ति**शब्देन प्राप्तिर्विवक्षिता । ऐक्यज्ञानप्राप्त्यर्थमित्यर्थः । अज्ञाननिवृत्तिः प्रयोजनमित्याह ।। **अनर्थेति** । **अनर्थो** दुःखादिः । तद्धेतोस्तदुपादानस्याज्ञानस्य । **प्रहाणाय** निवृत्तय इत्यर्थः।

**ವೇದಾಂತಾನಾಮ್ ಆತ್ಮೈಕತ್ವಂ ವಿಷಯ ಇತ್ಯಾಹ – ಆತ್ಮೈಕತ್ವವಿದ್ಯಾಪ್ರತಿಪತ್ತಯ ಇತಿ ॥ ಪ್ರತಿಪತ್ತಿಶಬ್ದೇನ ಪ್ರಾಪ್ತಿರ್ವಿವಕ್ಷಿತಾ । ಐಕ್ಯಜ್ಞಾನಪ್ರಾಪ್ತ್ಯರ್ಥಮ್ ಇತ್ಯರ್ಥಃ । ಅಜ್ಞಾನನಿವೃತ್ತಿಃ ಪ್ರಯೋಜನಮ್ ಇತ್ಯಾಹ – ಅನರ್ಥೇತಿ ॥ ಅನರ್ಥಃ = ದುಃಖಾದಿಃ । ತದ್ಧೇತೋಃ = ತದುಪಾದಾನಸ್ಯಾಜ್ಞಾನಸ್ಯ । ಪ್ರಹಾಣಾಯ ನಿವೃತ್ತಯ ಇತ್ಯರ್ಥಃ ।**

ಅದ್ವೈತಿಗಳ ಮತದಲ್ಲಿ ಆತ್ಮೈಕತ್ವವೇ ವಿಷಯಾದಿಗಳೆಂದು 'ಆತ್ಮೈಕತ್ವ-ವಿದ್ಯಾಪ್ರತಿಪತ್ತಯೇ' ಎಂಬುದರಿಂದ ಸೂಚಿಸಿದ್ದಾರೆ. 'ಪ್ರತಿಪತ್ತಿ'ಶಬ್ದದಿಂದ 'ಪ್ರಾಪ್ತಿ' ಎಂಬರ್ಥವನ್ನು ತಿಳಿಯಬೇಕು. 'ಐಕ್ಯಜ್ಞಾನದ ಪ್ರಾಪ್ತಿಗೋಸ್ಕರ' ಎಂದರ್ಥ. ಅಜ್ಞಾನ-ನಿವೃತ್ತಿಯೇ ಪ್ರಯೋಜನವೆಂದು 'ಅನರ್ಥ' ಎಂಬ ವಿಶೇಷಣದಿಂದ ತಿಳಿಸಿದ್ದಾರೆ. ದುಃಖಾದಿಗಳೇ ಅನರ್ಥಗಳೆನಿಸಿವೆ. ಅವುಗಳಿಗೆ ಉಪಾದಾನಕಾರಣವಾದದ್ದು ಅಜ್ಞಾನ-ವೆನಿಸಿದೆ. ಅದರ ನಿವೃತ್ತಿಗೋಸ್ಕರ ಎಂದು ತಿಳಿಯಬೇಕು.

## ಅಜ್ಞಾನವು ಪ್ರಸಾದದಿಂದ ನಿವೃತ್ತವಾಗುವುದಿಲ್ಲವೇ?

ಶ್ರೀನಿವಾಸತೀರ್ಥೀಯ –

**नन्वनर्थहेतोरज्ञानस्य प्रसादेनापि निवृत्तिसम्भवात् किमात्मैकत्वज्ञानेनेत्यत उक्तम् – अद्वैतज्ञानैकनिबर्हणीय इति । अज्ञाननिवृत्तिद्वारेत्यर्थः ।**

**ನನು ಅನರ್ಥಹೇತೋರಜ್ಞಾನಸ್ಯ ಪ್ರಸಾದೇನಾಪಿ ನಿವೃತ್ತಿಸಂಭವಾತ್ ಕಿಂ ಆತ್ಮೈಕತ್ವಜ್ಞಾನೇನ ಇತ್ಯತ ಉಕ್ತಮ್ – ಅದ್ವೈತಜ್ಞಾನೈಕನಿಬರ್ಹಣೀಯ ಇತಿ ॥ 'ಅಜ್ಞಾನನಿವೃತ್ತಿದ್ವಾರಾ' ಇತ್ಯರ್ಥಃ।**

ಅನರ್ಥಕ್ಕೆ ಕಾರಣವಾದ ಅಜ್ಞಾನಾದಿಗಳು ಈಶ್ವರನ ಪ್ರಸಾದದಿಂದ ನಿವೃತ್ತಿ-ಯಾಗುತ್ತವೆ. ಹೀಗಿರುವಾಗ ಆತ್ಮೈಕ್ಯಜ್ಞಾನವನ್ನೇಕೆ ಪಡೆಯಬೇಕು? ಎಂಬ ಪ್ರಶ್ನೆಗೆ 'ಅದ್ವೈತಜ್ಞಾನೈಕನಿಬರ್ಹಣೀಯಃ' ಎಂಬುದರಿಂದ ಉತ್ತರಿಸಿದ್ದಾರೆ. 'ಅಜ್ಞಾನ-ನಿವೃತ್ತಿಯ ಮೂಲಕವಾಗಿ' ಎಂದು ಅಭಿಪ್ರಾಯ.

## ಜಗತ್ತಿಗೆ ಸ್ವತಃ ನಿವೃತ್ತಿ

ಶ್ರೀನಿವಾಸತೀರ್ಥೀಯ –

**यतो ज्ञानमज्ञानस्यैव साक्षान्निवर्तकमित्यङ्गीकारादैक्यज्ञानेनोपादानभूतेऽज्ञाने निवृत्ते तत्कार्यं स्वयमेव नश्यतीति भावः ।**

**ಯತೋ 'ಜ್ಞಾನಮಜ್ಞಾನಸ್ಯೈವ ಸಾಕ್ಷಾತ್ ನಿವರ್ತಕಃ' ಇತ್ಯಂಗೀಕಾರಾ-ದೈಕ್ಯಜ್ಞಾನೇನ ಉಪಾದಾನಭೂತೇಽಜ್ಞಾನೇ ನಿವೃತ್ತೇ ತತ್ಕಾರ್ಯಂ ಸ್ವಯ-ಮೇವ ನಶ್ಯತೀತಿ ಭಾವಃ।**

ಯಾವ ಕಾರಣದಿಂದ 'ಜ್ಞಾನವು ಅಜ್ಞಾನಕ್ಕೆ ಮಾತ್ರ ಸಾಕ್ಷಾತ್ ನಿವರ್ತಕ' ಎಂದಂಗೀಕರಿಸಲಾಗಿದೆಯೋ ಆ ಕಾರಣದಿಂದ ಐಕ್ಯಜ್ಞಾನಕ್ಕೆ ಉಪಾದಾನ ಕಾರಣವಾದ ಅಜ್ಞಾನವು ನಿವೃತ್ತವಾಗುತ್ತದೆ. ತತ್ಕಾರ್ಯವಾದ ಸಮಸ್ತಜಗತ್ತು ಕೂಡ ಸ್ವತಃ ನಿವರ್ತ-ವಾಗುತ್ತದೆಂದು ಅಭಿಪ್ರಾಯ.

## ಸತ್ಯವಾದದ್ದರ ನಿವೃತ್ತಿಗೆ ಪ್ರಸಾದ ಬೇಕು

ಶ್ರೀನಿವಾಸತೀರ್ಥೀಯ –

सत्यस्यैव निगडबन्धादेर्निवृत्तौ प्रभुप्रसादापेक्षा । न तु मिथ्या-भूतस्य शुक्तिरूप्यादेरित्यभिप्रेत्योक्तम् – **अपरमार्थ एवेति** ।। अपर-मार्थत्वे हेतुमाह – **अज्ञानादिनिमित्त इति** ।।

**ಸತ್ಯಸ್ಯೈವ ನಿಗಡಬಂಧಾದೇರ್ನಿವೃತ್ತೌ ಪ್ರಭುಪ್ರಸಾದಾಪೇಕ್ಷಾ । ನತು ಮಿಥ್ಯಾಭೂತಸ್ಯ ಶುಕ್ತಿರೂಪ್ಯಾದೇರಿತ್ಯಭಿಪ್ರೇತ್ಯ ಉಕ್ತಮ್ – ಅಪರಮಾರ್ಥ ಏವೇತಿ ॥ ಅಪರಮಾರ್ಥತ್ವೇ ಹೇತುಮಾಹ – ಅಜ್ಞಾನಾದಿನಿಮಿತ್ತ ಇತಿ ॥**

ಒಟ್ಟು ಸತ್ಯವಾಗಿದ್ದರೆ ಮಾತ್ರ ಅದರ ನಿವೃತ್ತಿಗಾಗಿ ಪ್ರಸಾದದ ಅವಶ್ಯಕತೆ ಇರುತ್ತದೆ. ಕಳ್ಳನಿಗೆ ಬಿಡುಗಡೆಯಾಗಬೇಕೆಂದರೆ ರಾಜನ (ಪ್ರಸಾದದ) ಅಪೇಕ್ಷೆ ಇರುವುದು ಕಂಡಿದೆ. ಆದರೆ ಮಿಥ್ಯಾಭೂತದ (ಶುಕ್ತಿರಜತಾದಿ)ನಿವೃತ್ತಿಗಾಗಿ ಪ್ರಸಾದದ ಅಪೇಕ್ಷೆ ಇರುವುದಿಲ್ಲ.

ಪ್ರಕೃತ ಅಜ್ಞಾನವು ಅಪಾರಮಾರ್ಥಿಕವಾಗಿದೆ. ಈ ವಿಷಯದಲ್ಲಿ 'ಅಜ್ಞಾನಾದಿ ನಿಮಿತ್ತಃ' ಎಂಬುದರಿಂದ ಉತ್ತರಿಸಿದ್ದಾರೆ.

## ಆದರೆ ದುಃಖಾದಿಗಳು ಮಿಥ್ಯಾಭೂತ

ಶ್ರೀನಿವಾಸತೀರ್ಥೀಯ –

**कारणमात्रवाचीनिमित्तशब्दोऽत्र तद्विशेष उपादाने पर्यवस्यति । तथाचाज्ञानोपादानकत्वान्मिथ्यात्वम् । अज्ञानतत्कार्ययोरन्यतरत्वस्यैव मिथ्यात्वलक्षणत्वादिति भावः ।**

**ಕಾರಣಮಾತ್ರವಾಚಿನಿಮಿತ್ತಶಬ್ದೋತ್ರ ತದ್ವಿಶೇಷ ಉಪಾದಾನೇ ಪರ್ಯ-ವಸ್ಯತಿ । ತಥಾ ಚ ಅಜ್ಞಾನೋಪಾದಾನಕತ್ವಾತ್ ಮಿಥ್ಯಾತ್ವಮ್ । ಅಜ್ಞಾನ-ತತ್ಕಾರ್ಯಯೋರನ್ಯತರತ್ವಸ್ಯೈವ ಮಿಥ್ಯಾತ್ವಲಕ್ಷಣತ್ವಾದಿತಿ ಭಾವಃ।**

'ಅಜ್ಞಾನಾದಿನಿಮಿತ್ತೋಽಯಂ' ಎಂಬಲ್ಲಿರುವ 'ನಿಮಿತ್ತ'ಶಬ್ದವು ಕಾರಣವಿಶೇಷ-ವಾದ ಉಪಾದಾನಕಾರಣವನ್ನೇ ಹೇಳುತ್ತಿದೆ. ಆದ್ದರಿಂದ ಅಜ್ಞಾನಕ್ಕೆ ಉಪಾದಾನ-ಕಾರಣವಾಗಿರುವುದರಿಂದ ಮಿಥ್ಯಾಭೂತವಾಗಿದೆಯೆಂದು ತಿಳಿಯಬೇಕು. ಅಜ್ಞಾನ ಹಾಗೂ ಅಜ್ಞಾನಕಾರ್ಯವು ಮಿಥ್ಯಾಭೂತವಾಗಿದೆಯೆಂದು ನಾವು ಅಂಗೀಕರಿಸಿದ್ದೇವೆ.

### ಇಷ್ಟು ನೆನೆಪಿಡಿ

**ಜೀವನು ಬ್ರಹ್ಮನೇ ಆಗಿದ್ದಾನೆ. ಹಾಗಾದರೆ ಬ್ರಹ್ಮನಂತೆ ಇವನೂ ಕೂಡ ದುಃಖರಹಿತನಾಗಲಿ ಎಂದರೆ ಇವನೂ ಬ್ರಹ್ಮನೇ ಆಗಿದ್ದರೂ ತಾನು ಬ್ರಹ್ಮ-ಸ್ವರೂಪನಾಗಿದ್ದೇನೆ ಎಂಬ ಐಕ್ಯಜ್ಞಾನವು ಇರುವುದಿಲ್ಲ. ಐಕ್ಯದ ಅಜ್ಞಾನವೇ ಇರುತ್ತದೆ. ತನ್ನಿಮಿತ್ತಕವಾಗಿ ಜೀವನಿಗೆ ದುಃಖಾದಿಗಳು ಪ್ರಸಕ್ತವಾಗಿವೆ. ಅಜ್ಞಾನವು ದುಃಖಾದಿ ಕಾರ್ಯಕ್ಕೆ ಉಪಾದಾನಕಾರಣವಾಗಿದೆ. ದುಃಖಾದಿಗಳು ಅಜ್ಞಾನದ ಕಾರ್ಯವಾಗಿದೆ. ಅಜ್ಞಾನ ಹಾಗೂ ಅಜ್ಞಾನ-ಕಾರ್ಯಗಳೆರಡೂ ಮಿಥ್ಯಾಭೂತವಾಗಿದೆಯೆಂದು ಮಾಯಾವಾದಿಗಳು ಹೇಳುತ್ತಾರೆ.**

## ದುಃಖಾದಿಗಳೇಕೆ ಮಿಥ್ಯಾಭೂತ?

ಶ್ರೀನಿವಾಸತೀರ್ಥೀಯ –

ननु जीवे दुःखाद्यनर्थरूपबन्धस्य अज्ञानोपादानकत्वान्मिथ्यात्वं कुतोऽङ्गीक्रियते । सत्यत्वमेव कस्मान्न स्यादित्यत उक्तम् – **स्वतः परब्रह्मभूतस्येति** । तथाच जीवगतदुःखादिबन्धस्य सत्यत्वे विरुद्ध-धर्माधिकरणत्वेन जीवब्रह्मणोरैक्यायोगादिति भावः ।

**ನನು ಜೀವೇ ದುಃಖಾದ್ಯನರ್ಥರೂಪಬಂಧಸ್ಯ ಅಜ್ಞಾನೋಪಾದಾನಕತ್ವಾತ್ ಮಿಥ್ಯಾತ್ವಂ ಕುತೋಽಂಗೀಕ್ರಿಯತೇ । ಸತ್ಯತ್ವಮೇವ ಕಸ್ಮಾನ್ನ ಸ್ಯಾತ್, ಇತ್ಯತ ಉಕ್ತಮ್ – ಸ್ವತಃ ಪರಬ್ರಹ್ಮಭೂತಸ್ಯೇತಿ ॥ ತಥಾ ಚ ಜೀವಗತದುಃಖಾದಿ-ಬಂಧಸ್ಯ ಸತ್ಯತ್ವೇ ವಿರುದ್ಧಧರ್ಮಾಧಿಕರಣತ್ವೇನ ಜೀವಬ್ರಹ್ಮಣೋರೈಕ್ಯಾ-ಯೋಗಾತ್ ಇತಿ ಭಾವಃ ।**

ಹಾಗಾದರೆ ದುಃಖಾದ್ಯನರ್ಥರೂಪವಾದ ಬಂಧಕ್ಕೆ ಅಜ್ಞಾನವು ಉಪಾದಾನ ಕಾರಣವೆಂದು ಹೇಳಿದಂತಾಯಿತು. ಇದಕ್ಕೇಕೆ ಮಿಥ್ಯಾತ್ವವನ್ನು ಅಂಗೀಕರಿಸಬೇಕು. ಸತ್ಯತ್ವವನ್ನೇ ಏಕೆ ಅಂಗೀಕರಿಸಬಾರದು? ಎಂಬ ಪ್ರಶ್ನೆಗೆ ಸ್ವತಃ ಪರಬ್ರಹ್ಮಭೂತಸ್ಯ ಎಂಬುದರಿಂದ ಉತ್ತರಿಸಿದ್ದಾರೆ. ಆದ್ದರಿಂದ ಜೀವನಲ್ಲಿರುವ ದುಃಖಾದಿಬಂಧವು ಸತ್ಯ-ವಾದರೆ ವಿರುದ್ಧಧರ್ಮಾಧಿಕರಣವಾಗುವುದರಿಂದ ಜೀವಬ್ರಹ್ಮರಿಗೆ ಐಕ್ಯವೇ ಅಯುಕ್ತ-ವಾಗುತ್ತದೆಂದು ಇದರ ಅಭಿಪ್ರಾಯ.

### ಪ್ರಶ್ನೋತ್ತರ

ಪ್ರಶ್ನೆ – ದುಃಖಾದಿಗಳು ಅಪಾರಮಾರ್ಥಿಕವಾದರೆ ಹೇಗೆ ನಾಶವಾಗುತ್ತದೆ?

ಉತ್ತರ – ಐಕ್ಯಜ್ಞಾನವನ್ನು ಹೊಂದಿದರೆ ಮಾತ್ರ ದುಃಖಾದಿಗಳು ನಾಶವಾಗುತ್ತವೆ.

ಪ್ರಶ್ನೆ – ಐಕ್ಯಜ್ಞಾನದಿಂದ ದುಃಖವು ಹೇಗೆ ನಾಶವಾಗಲು ಸಾಧ್ಯ ? ಜ್ಞಾನದಿಂದ ಅಜ್ಞಾನವಷ್ಟೇ ನಾಶವಾಗುತ್ತದೆ. ದುಃಖಾದಿಗಳು ಅಜ್ಞಾನವಲ್ಲದಿದ್ದರಿಂದ ಹೇಗೆ ನಾಶವಾಗಲು ಸಾಧ್ಯ ?

ಉತ್ತರ – ದುಃಖಾದಿಗಳು ಅಜ್ಞಾನವಲ್ಲದಿದ್ದರೂ ಅಜ್ಞಾನಕಾರ್ಯವೆನಿಸಿವೆ. ಐಕ್ಯಜ್ಞಾನದಿಂದ ಅಜ್ಞಾನವು ನಿವೃತ್ತವಾದಾಗ ತತ್ಕಾರ್ಯವಾದ ದುಃಖಾದಿಗಳು ತಾನಾಗಿಯೇ ನಿವೃತ್ತವಾಗುತ್ತವೆ ಎಂದಭಿಪ್ರಾಯ.

**ನೆನೆಪಿಟ್ಟುಕೊಳ್ಳಿ**

**ಅದ್ವೈತಮತದಲ್ಲಿಅನುಬಂಧಚತುಷ್ಟಯ**

ಅನುಬಂಧಚತುಷ್ಟಯವನ್ನು ಅದ್ವೈತಿಗಳು ಹೀಗೆ ಹೇಳುತ್ತಾರೆ.

1. **ವಿಷಯ –** ಜೀವಬ್ರಹ್ಮರ ಐಕ್ಯವೇ ಶಾಸ್ತ್ರಕ್ಕೆ ವಿಷಯ.

2. **ಪ್ರಯೋಜನ –** ಐಕ್ಯಜ್ಞಾನದಿಂದ ಐಕ್ಯಾಜ್ಞಾನನಿವೃತ್ತಿಯು ಉಂಟಾಗುತ್ತದೆ. ತನ್ಮೂಲಕ ಅಜ್ಞಾನಕಾರ್ಯವಾದ ದುಃಖಾದಿಗಳು ಸ್ವತಃ ನಿವೃತ್ತವಾಗುತ್ತವೆ.

3. **ಅಧಿಕಾರಿ –** ಐಕ್ಯ ಅಜ್ಞಾನವನ್ನು ನಿವೃತ್ತಿಮಾಡಿಕೊಳ್ಳುವ ಇಚ್ಛೆಯುಳ್ಳವನು, ಹಾಗೂ ಅಜ್ಞಾನಿಯಾದವನು ಅಧಿಕಾರಿಯಾಗುತ್ತಾನೆ.

4. **ಸಂಬಂಧ –** ಇವುಗಳಿಗೆ ಇರುವ ಜ್ಞಾತೃಜ್ಞೇಯಭಾವ ಮೊದಲಾದವುಗಳೇ ಸಂಬಂಧ.

ಹೀಗೆ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳಿರುವುದರಿಂದ ವೇದ ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರಗಳು ಆರಂಭಣೀಯವಾಗಿವೆ.

**ಸಾರಾಂಶ –**

ಜೀವನು ಬ್ರಹ್ಮನೇ ಆಗಿದ್ದಾನೆ. ಇಷ್ಟೆಲ್ಲ ಕಷ್ಟಕಾರ್ಪಣ್ಯಗಳು ಜೀವನನ್ನು ಏಕೆ ಸುತ್ತುವರೆದಿವೆ? ಎಂದರೆ ಇದಕ್ಕೆ ಅಜ್ಞಾನವೇ ಮೂಲಕಾರಣ. ಅಜ್ಞಾನವು ತೊಲಗಿದರೆ ಕಷ್ಟಕಾರ್ಪಣ್ಯಗಳೆಲ್ಲವೂ ದೂರವಾಗುತ್ತವೆ. ಜೀವಬ್ರಹ್ಮರಿಗೆ ಐಕ್ಯವಿದೆ ಎಂಬುದನ್ನು ಸರಿಯಾಗಿ ತಿಳಿದುಬಿಟ್ಟರೆ ಅಜ್ಞಾನವು ತೊಲಗುತ್ತದೆ. ಅಜ್ಞಾನವೇ ಓಡಿಹೋದಮೇಲೆ ಕಷ್ಟಕಾರ್ಪಣ್ಯಗಳಿಂದ ನಾವು ಬಿಡುಗಡೆ ಪಡೆಯಬಹುದು.

ಸಕಲವೇದಗಳ ಉದ್ದೇಶ ಐಕ್ಯವನ್ನು ಪ್ರತಿಪಾದಿಸುವಿಕೆ. ಅದಕ್ಕಾಗಿಯೇ ಬ್ರಹ್ಮ-ಸೂತ್ರಗಳ ಪ್ರವೃತ್ತಿಯೂ ಕೂಡ.

## ಪ್ರಶ್ನೆಗಳು –

1. ಜೀವಬ್ರಹ್ಮರಿಗೆ ಐಕ್ಯವಿರುವುದಾದರೆ ನಾವೆಲ್ಲರೂ ಜೀವರಾಗಿದ್ದೇವೆ ಎಂಬ ವ್ಯವಹಾರ ಏಕೆ? ಬ್ರಹ್ಮರೆಂಬ ವ್ಯವಹಾರ ಏಕಿಲ್ಲ?

2. ಅದ್ವೈತಿಗಳ ಪ್ರಕಾರ ಐಕ್ಯಜ್ಞಾನದ ಪ್ರಯೋಜನ ಏನು?

3. ಸಂಸಾರದಲ್ಲಿ ಬಳಲುತ್ತಿರುವ ನಮ್ಮನ್ನು ಕುರಿತು ಅದ್ವೈತಿಗಳು ಮಾಡುವ ಸಮಾಧಾನವೇನು?

4. ಅದ್ವೈತಿಗಳ ಪ್ರಕಾರ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳು ಯಾವವು?

5. 'ವೇದಾಂತ' 'ಇತಿಕರ್ತವ್ಯತಾ' ಈ ಎರಡು ಶಬ್ದಗಳ ಅರ್ಥವೇನು?

6. ಶಾಸ್ತ್ರಾಧ್ಯಯನದಲ್ಲಿ ಶೀಘ್ರವಾಗಿ ಪ್ರವೃತ್ತಿ ಮಾಡಲು ಅದ್ವೈತಮತವು ಪ್ರೋತ್ಸಾಹ ನೀಡುತ್ತದೋ? ಅಥವಾ ದ್ವೈತಮತವೋ? ಕಾರಣವೇನು?

* ಈ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ತಿಳಿಯದಿದ್ದರೆ ಮತ್ತೊಮ್ಮೆ ಓದಿರಿ *

## ಮಂಗಳಾಚರಣೆ

ಟೀಕಾ –

तमेतं शास्त्रस्य पराभिमतमधिकारिविषयप्रयोजनसम्बन्धं निरस्य स्वाभिमतं समर्थयितुमिदं प्रकरणमारभमाणो भगवानाचार्यो नारायणस्तवनतत्प्रीतिप्रार्थनारूपमादितो मङ्गळमाचरति ।

**ತಮೇತಂ ಶಾಸ್ತ್ರಸ್ಯ ಪರಾಭಿಮತಮ್ ಅಧಿಕಾರಿವಿಷಯಪ್ರಯೋಜನಸಂಬಂಧಂ ನಿರಸ್ಯ, ಸ್ವಾಭಿಮತಂ ಸಮರ್ಥಯಿತುಂ ಇದಂ ಪ್ರಕರಣಮಾರಭಮಾಣೋ ಭಗವಾನಾಚಾರ್ಯೋ ನಾರಾಯಣಸ್ತವನತತ್ಪ್ರಾರ್ಥನಾರೂಪಮಾದಿತೋ ಮಂಗಳಮಾಚರತಿ ।**

**ಇಲ್ಲಿಯ ತನಕ ಮಾಯಾವಾದಿಗಳಿಗೆ ಸಮ್ಮತವಾದ ಅಧಿಕಾರಿ, ವಿಷಯ, ಪ್ರಯೋಜನ ಮತ್ತು ಸಂಬಂಧ ಇವುಗಳನ್ನು ತೋರಿಸಿದರು. ಪ್ರಕೃತ ಮಾಯಾವಾದಿಗಳು ಹೇಳುವ ವಿಷಯಪ್ರಯೋಜನಾದಿಗಳನ್ನು ನಿರಾಕರಿಸಿ ತತ್ವವಾದಿಗಳಿಗೆ ಸಮ್ಮತವಾದ ವಿಷಯಪ್ರಯೋಜನಾದಿಗಳನ್ನು ಸಮರ್ಥಿಸುವುದಕ್ಕಾಗಿ ಈ ಪ್ರಕರಣವು ಪ್ರಾರಂಭವಾಗುತ್ತಿದೆ. ಈ ವಿಷಯವನ್ನು ಸಮರ್ಥಿಸಲು ಪೂಜ್ಯರಾದ ಶ್ರೀಮದಾಚಾರ್ಯರು ನಾರಾಯಣನ ಸ್ತೋತ್ರರೂಪವಾದ ಮತ್ತು ಪ್ರೀತಿಪ್ರಾರ್ಥನಾರೂಪವಾದ ಮಂಗಳವನ್ನು ಪ್ರಾರಂಭದಲ್ಲಿ ಆಚರಿಸುತ್ತಿದ್ದಾರೆ.**

**ಟೀಕೆಯ ಅರ್ಥ** – ಶಾಸ್ತ್ರಸ್ಯ = ವೇದ ಹಾಗೂ ಬ್ರಹ್ಮಮೀಮಾಂಸಾ ಶಾಸ್ತ್ರಗಳಿಗೆ, ತಮೇತಂ = ಹೀಗೆ ಪ್ರಸಕ್ತವಾದ, ಪರಾಭಿಮತಂ = ಅದ್ವೈತಿಗಳಿಗೆ ಅಭಿಪ್ರೇತವಾದ, ಅಧಿಕಾರಿವಿಷಯಪ್ರಯೋಜನಸಂಬಂಧಂ = ಅಧಿಕಾರಿ, ವಿಷಯ, ಪ್ರಯೋಜನ ಸಂಬಂಧಗಳನ್ನು, ನಿರಸ್ಯ = ನಿರಾಕರಿಸಿ, ಸ್ವಾಭಿಮತಂ = ತತ್ವವಾದಿಗಳಾದ ತಮಗೆ ಸಮ್ಮತವಾದ ವಿಷಯಾದಿ-ಗಳನ್ನು, ಸಮರ್ಥಯಿತುಂ = ಸಮರ್ಥನೆ ಮಾಡುವುದಕ್ಕಾಗಿ, ಇದಂ ಪ್ರಕರಣಂ = ಈ ಉಪಾಧಿಖಂಡನ ಎಂಬ ಪ್ರಕರಣವನ್ನು, ಆರಭಮಾಣಃ = ಪ್ರಾರಂಭ ಮಾಡುವವರಾಗಿ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನರಾದ, ಆಚಾರ್ಯಃ = ಶ್ರೀಮದಾಚಾರ್ಯರು, ನಾರಾಯಣಸ್ತವನತತ್ಪ್ರೀತಿಪ್ರಾರ್ಥನಾರೂಪಂ = ನಾರಾಯಣಸ್ತೋತ್ರತತ್ಪ್ರೀತಿಪ್ರಾರ್ಥನಾರೂಪವಾದ, ಮಂಗಳಂ = ಮಂಗಳಾಚರಣೆಯನ್ನು, ಆದಿತಃ = ಗ್ರಂಥದ ಪ್ರಾರಂಭದಲ್ಲಿ, ಆಚರತಿ = ಆಚರಿಸುತ್ತಿದ್ದಾರೆ.

ಶ್ರೀಮನ್ಮಧ್ವಾಚಾರ್ಯರಿಂದ ಪ್ರಣೀತವಾದ

# ಉಪಾಧಿಖಂಡನ

**नारायणोऽगण्यगुणनित्यैकनिलयाकृतिः ।**
**अशेषदोषरहितः प्रीयतां कमलालयः ।। १ ।।**

**ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।**
**ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ।।1।।**

ನಾರಾಯಣನು ಎಣಿಸಲು ಸಾಧ್ಯವಿಲ್ಲದಷ್ಟು, ಅನಂತ ಗುಣಗಳ ಗಣಿಗೆ ಮುಖ್ಯವಾದ ಆಶ್ರಯನು. ಸಕಲವಿಧವಾದ ದೋಷಗಳಿಂದ ರಹಿತನು. ಲಕ್ಷ್ಮೀದೇವಿಗೆ ಒಡೆಯನೂ ಕೂಡ ಆಗಿರುತ್ತಾನೆ. ಇಂತಹ ಭಗವಂತನು ನಮ್ಮ ವಿಷಯದಲ್ಲಿ ಪ್ರೀತನಾಗಲಿ.

**ಮೂಲದ ಅರ್ಥ–** ಅಗಣ್ಯಗುಣನಿತ್ಯೈಕನಿಲಯಾಕೃತಿಃ = ಎಣಿಸಲು ಸಾಧ್ಯ-ವಾಗದ, ಅನಂತಗುಣಗಳಿಗೆ ನಿರಂತರ ಮುಖ್ಯವಾಗಿ ಆಶ್ರಯವಾದ ಸ್ವರೂಪವುಳ್ಳ, ಅಶೇಷದೋಷರಹಿತಃ = ಯಾವುದೇ ಒಂದೂ ದೋಷವಿಲ್ಲದ, ಕಮಲಾಲಯಃ = ಲಕ್ಷ್ಮೀಪತಿಯಾದ, ನಾರಾಯಣಃ = ನಾರಾಯಣನು, ಪ್ರೀಯತಾಂ = ಪ್ರೀತನಾಗಲಿ.

## ಮೂಲಶ್ಲೋಕಕ್ಕೆ ವ್ಯಾಖ್ಯಾನ

ಟೀಕಾ –

अगण्यगुणानां नित्यैकनिलया सदा मुख्याश्रया आकृतिः मूर्तिर्यस्यासौ तथोक्तः । प्रीयतां अस्माकमिति शेषः । अभ्यर्हितत्वेन सिद्धत्वात् इदं नोक्तम् । अत्राऽद्य-विशेषणद्वयं स्तुत्यर्थमपि उत्तरप्रबन्धप्रसङ्गोपक्षेपाय कृतम् । अथवा नानिर्धारितस्वरूपस्य प्रसादाशंसनं

युक्तम् । न च लक्षणेन विना निर्धारणमिति लक्षणद्वया-
भिधानमिदम् ।

ಅಗಣ್ಯಗುಣಾನಾಂ ನಿತ್ಯೈಕನಿಲಯಾ ಸದಾ ಮುಖ್ಯಾಶ್ರಯಾ ಆಕೃತಿಃ ಮೂರ್ತಿರ್ಯಸ್ಯಾಸೌ ತಥೋಕ್ತಃ। 'ಪ್ರೀಯತಾಮ್ ಅಸ್ಮಾಕಮ್' ಇತಿ ಶೇಷಃ । ಅಭ್ಯರ್ಹಿತತ್ವೇನ ಸಿದ್ಧತ್ವಾತ್ ಇದಂ ನೋಕ್ತಮ್ । ಅತ್ರ ಆದ್ಯವಿಶೇಷಣದ್ವಯಂ ಸ್ತುತ್ಯರ್ಥಮಪಿ ಉತ್ತರಪ್ರಬಂಧಪ್ರಸಂಗೋ-ಪಕ್ಷೇಪಾಯ ಕೃತಮ್ । ಅಥವಾ ನಾನಿರ್ಧಾರಿತಸ್ವರೂಪಸ್ಯ ಪ್ರಸಾದಾ-ಶಂಸನಂ ಯುಕ್ತಮ್ । ನ ಚ ಲಕ್ಷಣೇನ ವಿನಾ ನಿರ್ಧಾರಣಮಿತಿ ಲಕ್ಷಣದ್ವಯಾಭಿಧಾನಮಿದಮ್ ।

ನಾರಾಯಣನು ಅನಂತವಾದ ಗುಣಗಳಿಗೆ ಆಶ್ರಯನಾಗಿದ್ದಾನೆಂದು ಹೇಳಿದರು. 'ಅಗಣ್ಯಗುಣನಿತ್ಯೈಕನಿಲಯಾಕೃತಿಃ' ಎಂಬ ಶಬ್ದಕ್ಕೆ 'ಎಣಿಸಲು ಅಶಕ್ಯವಾದ ಗುಣಗಳಿಗೆ ನಿತ್ಯವಾಗಿ ಮುಖ್ಯಾಶ್ರಯನಾದ ವ್ಯಕ್ತಿಯು ಯಾವಾತನು ಇದ್ದಾನೋ ಅವನು' ಎಂದರ್ಥ. ಶ್ಲೋಕದಲ್ಲಿ 'ಪ್ರೀಯತಾಂ' ಎಂಬ ಕ್ರಿಯಾಪದದ ಜೊತೆಗೆ 'ಅಸ್ಮಾಕಂ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಪ್ರಧಾನವಾಗಿ ಸಿದ್ಧವಾದ್ದರಿಂದ 'ಅಸ್ಮಾಕಂ' ಎಂಬುದನ್ನು ಪ್ರತ್ಯೇಕವಾಗಿ ಹೇಳಿರುವುದಿಲ್ಲ. ನಾರಾಯಣನಿಗೆ ಅಗಣ್ಯಗುಣಾಶ್ರಯತ್ವವು ಹೇಗೆ ಕೂಡುತ್ತದೆ? ಎಂಬ ಆಕ್ಷೇಪದ ಸಮಾಧಾನಕ್ಕಾಗಿ 'ಅಜ್ಞತಾಽ-ಖಿಲಸಂವೇತ್ತುಃ' ಎಂಬ ಮುಂದಿನ ಮೂಲವು ಹೊರಟಿದೆ. ಈ ಆಕ್ಷೇಪಕ್ಕೆ ಅನುಕೂಲವಾಗಲು ಮತ್ತು ಭಗವಂತನ ಪ್ರಶಂಸೆಗೆ ಅನುಕೂಲವಾಗಲೂ ಸಹ 'ಅಗಣ್ಯಗುಣನಿತ್ಯೈಕನಿಲಯಾಕೃತಿಃ' ಮತ್ತು 'ಅಶೇಷದೋಷರಹಿತಃ' ಎಂಬೆರಡು ವಿಶೇಷಣಗಳನ್ನು ಹೇಳಿರುತ್ತಾರೆ. ಅಥವಾ ಶ್ರೀಮದಾಚಾರ್ಯರು ನಾರಾಯಣನ ಪ್ರೀತಿಯನ್ನು ಅಪೇಕ್ಷಿಸಿದ್ದಾರೆ. ಹೀಗಿರುವಾಗ ಅವನ ಸ್ವರೂಪವನ್ನೇ ತಿಳಿಯದೆ ಅವನ ಪ್ರೀತಿಯನ್ನು ಅಪೇಕ್ಷಿಸುವುದು ತಪ್ಪಾಗುತ್ತದೆ.

**ಲಕ್ಷಣಜ್ಞಾನವಿಲ್ಲದೆ ಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ. ಈ ಅಭಿಪ್ರಾಯದಿಂದಲೂ ಸಹ 'ಅಗಣ್ಯಗುಣನಿತ್ಯೈಕನಿಲಯಾಕೃತಿಃ' ಮತ್ತು 'ಅಶೇಷದೋಷರಹಿತಃ' ಎಂಬೆರಡು ವಿಶೇಷಣಗಳನ್ನು ನಾರಾಯಣನ ಲಕ್ಷಣಗಳನ್ನಾಗಿ ಶ್ರೀಮದಾಚಾರ್ಯರು ಹೇಳಿದ್ದಾರೆ.**

ಟೀಕೆಯ ಅರ್ಥ – ಅಗಣ್ಯಗುಣಾನಾಂ = ಎಣಿಸಲು ಸಾಧ್ಯವಾಗದ ಗುಣಗಳಿಗೆ, ನಿತ್ಯೈಕನಿಲಯಾ = ಯಾವಾಗಲೂ ಮುಖ್ಯವಾಗಿ ಆಶ್ರಯವಾದ, ಆಕೃತಿಃ = ಮೂರ್ತಿಃ = ಶರೀರವು, ಯಸ್ಯ = ಯಾರಿಗೆ ಇದೆಯೋ, ಅಸೌ = ಅಂಥ ಭಗವಂತನು, ತಥೋಕ್ತಃ = ಅಗಣ್ಯಗುಣನಿತ್ಯೈಕನಿಲಯಾಕೃತಿಃ ಎಂದು ಕರೆಸಿಕೊಳ್ಳುತ್ತಾನೆ. ಪ್ರೀಯತಾಂ = ಸಂತುಷ್ಟನಾಗಲಿ ಎಂಬಲ್ಲಿ ಅಸ್ಮಾಕಂ ಇತಿ = ನಮಗೆ ಎಂಬ ಪದವನ್ನು, ಶೇಷಃ = ಇಟ್ಟುಕೊಳ್ಳಬೇಕು. ಅಭ್ಯರ್ಹಿತತ್ವೇನ = ಭಗವತ್ಪ್ರೀತಿಗೆ ತಾವೇ ಮುಖ್ಯಪಾತ್ರರಾಗಿದ್ದರಿಂದ, ಸಿದ್ಧತ್ವಾತ್ = ಸಿದ್ಧವಾದ ಕಾರಣ, ಇದಂ = ಅಸ್ಮಾಕಂ ಎಂಬ ಪದವನ್ನು , ನೋಕ್ತಂ = ಕಂಠತಃ ಹೇಳಿರುವುದಿಲ್ಲ.

ಅತ್ರ = ಈ ಮಂಗಳಶ್ಲೋಕದಲ್ಲಿ, ಆದ್ಯ ವಿಶೇಷಣದ್ವಯಂ = ಅಗಣ್ಯಗುಣನಿತ್ಯೈಕನಿಲಯಾಕೃತಿಃ, ಹಾಗೂ ಅಶೇಷದೋಷರಹಿತಃ ಎಂಬೆರಡು ವಿಶೇಷಣಗಳು, ಸ್ತುತ್ಯರ್ಥಮಪಿ = ಸ್ತುತಿಸುವುದಕ್ಕಾಗಿ ಪ್ರವೃತ್ತವಾಗಿದ್ದರೂ ಕೂಡ, ಉತ್ತರಪ್ರಬಂಧಪ್ರಸಂಗೋಪಕ್ಷೇಪಾಯ = ಮುಂದಿನ ಗ್ರಂಥದ ಪ್ರಸಕ್ತಿಯನ್ನು ಪ್ರಾರಂಭ ಮಾಡುವುದಕ್ಕಾಗಿಯೂ ಕೃತಂ = ಪ್ರಯೋಗಿಸಲ್ಪಟ್ಟಿವೆ. ಅಥವಾ = ಅಥವಾ, ಅನಿರ್ಧಾರಿತಸ್ವರೂಪಸ್ಯ = ಪರಮಾತ್ಮನ ಸ್ವರೂಪವು ನಿರ್ಧಾರವಾಗದೆ, ಪ್ರಸಾದಾಶಂಸನಂ = ಅವನ ಪ್ರಸಾದವನ್ನು ಅಪೇಕ್ಷಿಸುವುದು, ನ ಯುಕ್ತಂ = ಯುಕ್ತವಾಗುವುದಿಲ್ಲ. ಲಕ್ಷಣೇನ ವಿನಾ = ಭಗವಂತನ ಲಕ್ಷಣವನ್ನು ಹೇಳದೇ, ನಿರ್ಧಾರಣಂ = ಅವನ ಸ್ವರೂಪವು, ನಚ = ಸಿದ್ಧವಾಗುವುದಿಲ್ಲ. ಇತಿ = ಆದ್ದರಿಂದ, ಇದಂ = ಈ ಲಕ್ಷಣದ್ವಯಾಭಿಧಾನಂ = ಪರಮಾತ್ಮನ ಎರಡು ಲಕ್ಷಣವನ್ನು ಹೇಳಿರುತ್ತಾರೆ.

## 'ಈಶ್ವರ' ಎಂದರೇನು?

**ಟೀಕಾ –**

**यथोक्तम् –**

अतोऽशेषगुणोन्नद्धं निर्दोषं यावदेव हि ।
तावदेवेश्वरो नाम तत्र भेदोऽपि न क्वचित् । इति ।।

नारायणप्रीतिरिव रमायाः प्रीतिरपि प्रार्थनीयेति ज्ञापनाय कमलालयः इत्युक्तम् ।

ಯಥೋಕ್ತಮ್ –
ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।
ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥ ಇತಿ ।

'ನಾರಾಯಣಪ್ರೀತಿರಿವ ರಮಾಯಾಃ ಪ್ರೀತಿರಪಿ ಪ್ರಾರ್ಥನೀಯಾ' ಇತಿ ಜ್ಞಾಪನಾಯ ಕಮಲಾಲಯಃ ಇತ್ಯುಕ್ತಮ್ ।

ಸಕಲಗುಣಗಳು ಪರಿಪೂರ್ಣವಾಗಿರುವಿಕೆ, ಸಕಲ ದೋಷವಿಲ್ಲದಿರುವಿಕೆ ಇವೆರಡು ವಿಶೇಷಣಗಳು ಭಗವಂತನ ಲಕ್ಷಣಗಳಾಗಿವೆ. ಇದನ್ನೇ ಶ್ರೀಮದಾಚಾರ್ಯರು –

ಅತೋಽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।
ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥

ಸಕಲಗುಣಪರಿಪೂರ್ಣವಾಗಿರುವಿಕೆ ಮತ್ತು ದೋಷವಿಲ್ಲದಿರುವಿಕೆ. ಇಷ್ಟೇ ಈಶ್ವರನ ಲಕ್ಷಣ. ಇವನಲ್ಲಿ ಭೇದಕ್ಕೆ ಅವಕಾಶವೇ ಇಲ್ಲ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

'ಭಗವಂತನ ಪ್ರೀತಿಯನ್ನು ಹೇಗೆ ಅಪೇಕ್ಷಿಸಬೇಕೋ ಹಾಗೆಯೇ ವಿದ್ಯಾಭಿಮಾನಿನಿಯಾದ ಲಕ್ಷ್ಮೀದೇವಿಯ ಪ್ರೀತಿಯನ್ನೂ ಅಪೇಕ್ಷಿಸಬೇಕು. ಇದನ್ನು ತಿಳಿಸುವುದಕ್ಕಾಗಿಯೇ 'ಕಮಲಾಲಯಃ' 'ಲಕ್ಷ್ಮೀದೇವಿಗೆ ಆಶ್ರಯನಾದವನು' ಎಂಬ ವಿಶೇಷಣವನ್ನು ಹೇಳಿರುತ್ತಾರೆ.

**ಟೀಕೆಯ ಅರ್ಥ –** ಯಥೋಕ್ತಂ = ಇದನ್ನೇ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಅಶೇಷಗುಣೋನ್ನದ್ಧಂ = ಅನಂತಗುಣಗಳಿಂದ ಪರಿಪೂರ್ಣವಾದ, ನಿರ್ದೋಷಂ = ದೋಷರಹಿತವಾದ, ಯಾವದೇವ ಹಿ = ಯಾವ ರೂಪಗಳಿವೆಯೋ, ತಾವದೇವ = ಅಷ್ಟು ಮಾತ್ರ , ಈಶ್ವರೋ ನಾಮ = ಈಶ್ವರ ಎಂದು ಕರೆಸಿಕೊಳ್ಳುತ್ತವೆ. ತತ್ರ = ಆ ರಾಮಕೃಷ್ಣಾದಿ-ರೂಪಗಳಲ್ಲಿ, ಭೇದೋಪಿ = ಮೂಲರೂಪಗಳಿಂದ ಭೇದವೂ ಕೂಡ, ನ ಕ್ವಚಿತ್ = ಯಾವುದೇ ರೀತಿ ಎಲ್ಲಿಯೂ ಇರುವುದಿಲ್ಲ. ಇತಿ = ಎಂದು.

ನಾರಾಯಣಪ್ರೀತಿರಿವ = ಭಗವಂತನ ಪ್ರೀತಿಯಂತೆ, ರಮಾಯಾಃ = ಲಕ್ಷ್ಮೀದೇವಿಯ, ಪ್ರೀತಿರಪಿ = ಪ್ರೀತಿಯೂ ಕೂಡ, ಪ್ರಾರ್ಥನೀಯಾ = ಪ್ರಾರ್ಥಿತವಾಗಿರುತ್ತದೆ; ಇತಿ = ಹೀಗೆ, ಜ್ಞಾಪನಾಯ = ಜ್ಞಾಪಿಸುವುದಕ್ಕಾಗಿ, ಕಮಲಾಲಯಃ ಇತಿ = ಕಮಲಾಲಯ ಎಂಬ ವಿಶೇಷಣವನ್ನು , ಉಕ್ತಮ್ = ಹೇಳಿರುತ್ತಾರೆ.

## ವಿಷಯಾದ್ಯಾಭಾಸಗಳ ನಿರಾಕರಣೆ

**ಮಂದಾರಮಂಜರೀ–**

तस्माद्विषयाद्याभासस्य प्रसक्तत्वात्तन्निराकरणं युक्तमित्याह– **तमेत-मिति ।।**

**ತಸ್ಮಾದ್ ವಿಷಯಾದ್ಯಾಭಾಸಸ್ಯ ಪ್ರಸಕ್ತತ್ವಾತ್ ನಿರಾಕರಣಂ ಯುಕ್ತಮ್ ಇತ್ಯಾಹ – ತಮೇತಮಿತಿ ॥**

ಇಲ್ಲಿಯವರೆಗೆ ಮಾಯಾವಾದಿಗಳ ಪ್ರಕಾರ ವಿಷಯಾಭಾಸ, ಪ್ರಯೋ-ಜನಾಭಾಸಾದಿಗಳನ್ನು ಪ್ರಾಸಂಗಿಕವಾಗಿ ತೋರಿಸಿದ್ದಾಯಿತು. ಅದರ ನಿರಾ-ಕರಣೆಯನ್ನು ಗ್ರಂಥದಲ್ಲಿ ಮಾಡುವುದು ಅತ್ಯಂತ ಯುಕ್ತವೆಂದು ಹೇಳುತ್ತಿದ್ದಾರೆ 'ತಮೇತಂ' ಇತ್ಯಾದಿ ವಾಕ್ಯದಿಂದ.

## ವೇದಾಂತಶಾಸ್ತ್ರದ ಅನುಬಂಧಚತುಷ್ಟಯ

ಮಂದಾರಮಂಜರೀ–

तदनेनास्य प्रकरणस्य वेदान्तविषयादितत्वं विषयः । तदवधारणं प्रयोजनम् । वेदान्तशुश्रूषुरधिकारी । सम्बन्धस्तु यथायोग्यमूहनीय इत्युक्तं भवति ।

ತದನೇನಾಸ್ಯ ಪ್ರಕರಣಸ್ಯ 'ವೇದಾಂತವಿಷಯಾದಿತತ್ವಂ' ವಿಷಯಃ । 'ತದವಧಾರಣಂ' ಪ್ರಯೋಜನಮ್ । 'ವೇದಾಂತಶುಶ್ರೂಷುಃ' ಅಧಿಕಾರೀ । ಸಂಬಂಧಸ್ತು ಯಥಾಯೋಗ್ಯಮ್ ಊಹನೀಯ ಇತ್ಯುಕ್ತಂ ಭವತಿ ।

ಈ ಪ್ರಕರಣಗ್ರಂಥಕ್ಕೆ ವೇದಾಂತಗಳ ವಿಷಯಾದಿಗಳನ್ನು ತಿಳಿಯುವಿಕೆಯೇ ವಿಷಯವೆಂದೂ, ಅದರ ಅವಧಾರಣೆಯೇ ಪ್ರಯೋಜನವೆಂದೂ, ವೇದಾಂತವನ್ನು ಕೇಳಲು ಬಯಸುವವನೇ ಅಧಿಕಾರಿಯೆಂದೂ ತಿಳಿಯಬೇಕು. ಸಂಬಂಧವನ್ನು ಯಥಾಯೋಗ್ಯವಾಗಿ ಊಹಿಸಿಕೊಳ್ಳಬೇಕೆಂದು ಹೇಳಿದಂತಾಯಿತು.

### ಈ ಪ್ರಕರಣ ಏಕೆ?

ಮಂದಾರಮಂಜರೀ–

ननु मीमांसया वेदान्तार्थनिर्णये विषयादिकं तत्रैव निश्चेष्यत इति किमनेन प्रकरणेनेति चेत्

ನನು ಮೀಮಾಂಸಯಾ ವೇದಾಂತಾರ್ಥನಿರ್ಣಯೇ ವಿಷಯಾದಿಕಂ ತತ್ರೈವ ನಿಶ್ಚೇಷ್ಯತ ಇತಿ ಕಿಮನೇನ ಪ್ರಕರಣೇನೇತಿ ಚೇತ್

ಬ್ರಹ್ಮಮೀಮಾಂಸಾಶಾಸ್ತ್ರವಿರುವುದೇ ವೇದಾಂತನಿರ್ಣಯಕ್ಕಾಗಿ. ಆದ್ದರಿಂದ

ವೇದಾಂತದಲ್ಲಿರುವ ವಿಷಯಪ್ರಯೋಜನಗಳನ್ನು ಸಮರ್ಥಿಸುವುದಕ್ಕಾಗಿ ಬ್ರಹ್ಮಮೀಮಾಂಸಾಶಾಸ್ತ್ರವೇ ನಿರ್ಣಾಯಕವಾಗಿರುತ್ತದೆ. ಹೀಗಿರುವಾಗ ಈ ಪ್ರಕರಣಗ್ರಂಥವನ್ನೇಕೆ ಪ್ರಾರಂಭಿಸಬೇಕು?

## ಸಾಮಾನ್ಯತಿಳುವಳಿಕೆಗೆ ಇದು ಬೇಕು

ಮಂದಾರಮಂಜರೀ–

नैष दोषः । वेदान्तविषयकप्रवृत्तिहेतुभूतस्य विषयादितत्वावधारणस्य प्रवृत्तिसाध्यवेदान्तश्रवणसाध्यत्वे अन्योन्याश्रयप्रसङ्गेन प्राक् प्रवृत्तेः सामान्याकारेण तज्ज्ञानोपायप्रकरणारम्भोपपत्तेः ।

ನೈಷ ದೋಷಃ । ವೇದಾಂತವಿಷಯಕಪ್ರವೃತ್ತಿಹೇತುಭೂತಸ್ಯ ವಿಷಯಾದಿತತ್ತ್ವಾವಧಾರಣಸ್ಯ ಪ್ರವೃತ್ತಿಸಾಧ್ಯವೇದಾಂತಶ್ರವಣಸಾಧ್ಯತ್ವೇ ಅನ್ಯೋನ್ಯಾಶ್ರಯಪ್ರಸಂಗೇನ ಪ್ರಾಕ್ ಪ್ರವೃತ್ತೇಃ ಸಾಮಾನ್ಯಾಕಾರೇಣ ತಜ್ಜ್ಞಾನೋಪಾಯಪ್ರಕರಣಾರಂಭೋಪಪತ್ತೇಃ।

ಹೀಗೆ ಪ್ರಶ್ನಿಸಬಾರದು. ವೇದಾಂತಗಳಲ್ಲಿ ಪ್ರವೇಶಿಸಬೇಕಾದರೆ ಮೊದಲು ವಿಷಯಾದಿತತ್ವಗಳ ನಿಶ್ಚಯಜ್ಞಾನವಿರಬೇಕು. ಆದರೆ ವೇದಾಂತಗಳ ವಿಷಯದಲ್ಲಿ ತತ್ವನಿಶ್ಚಯವಾಗಬೇಕೆಂದರೆ ಮೊದಲು ಪ್ರವೃತ್ತಿಮಾಡಿರಬೇಕು. ಪ್ರವೃತ್ತಿ ಇಲ್ಲದೆ ತತ್ವದ ಅವಧಾರಣೆಯಾಗುವುದಿಲ್ಲ. ತತ್ವದ ಅವಧಾರಣೆ ಇಲ್ಲದೆ ಪ್ರವೃತ್ತಿಯಾಗುವುದಿಲ್ಲವೆಂಬ ಅನ್ಯೋನ್ಯಾಶ್ರಯದೋಷ ಬರುತ್ತದೆ. ಇದರ ಪರಿಹಾರಕ್ಕಾಗಿ ಮೊದಲು ವೇದಾಂತಗಳ ವಿಷಯಾದಿಗಳ ಬಗ್ಗೆ ಸಾಮಾನ್ಯಜ್ಞಾನವನ್ನು ಹುಟ್ಟಿಸುವುದಕ್ಕಾಗಿ ಇಂತಹ ಪ್ರಕರಣಗ್ರಂಥಗಳು ಹೊರಟಿರುತ್ತವೆ ಎಂದು ಭಾವಿಸ(ತಿಳಿಯ)ಬೇಕು.

## ಇಲ್ಲಿ ಎರಡು ಮಂಗಳಾಚರಣೆ

ಮಂದಾರಮಂಜರೀ–

**नारायणस्तवनेति** ।। नारायणस्तवननारायणप्रीतिप्रार्थनारूप-मङ्गळद्वयाचरणं 'भूयांसि मङ्गळान्यनुष्ठितानि भूयसो विघ्नान् घ्नन्ति' इति सूचनार्थम् ।

ನಾರಾಯಣಸ್ತವನೇತಿ ॥ ನಾರಾಯಣಸ್ತವನನಾರಾಯಣಪ್ರೀತಿಪ್ರಾರ್ಥನಾರೂಪಮಂಗಳದ್ವಯಾಚರಣಂ 'ಭೂಯಾಂಸಿ ಮಂಗಲಾನ್ಯನುಷ್ಠಿತಾನಿ ಭೂಯಸೋ ವಿಘ್ನಾನ್ ಘ್ನಂತಿ' ಇತಿ ಸೂಚನಾರ್ಥಮ್ ।

ಶ್ರೀಮದಾಚಾರ್ಯರು ನಾರಾಯಣಸ್ತೋತ್ರ, ಹಾಗೂ ನಾರಾಯಣನ ಪ್ರೀತಿಪ್ರಾರ್ಥನೆ ಎಂದು ಎರಡು ಬಗೆಯಲ್ಲಿ ಮಂಗಳವನ್ನು ಆಚರಿಸಿದ್ದಾರೆ. ಏಕೆಂದರೆ 'ಭೂಯಾಂಸಿ ಮಂಗಳಾನ್ಯನುಷ್ಠಿತಾನಿ ಭೂಯಸೋ ವಿಘ್ನಾನ್ ಘ್ನಂತಿ' ಎಂಬ ಮಾತಿನಂತೆ 'ಅನೇಕವಿಧವಾದ ಮಂಗಳಾಚರಣೆಯು ಅನೇಕ ವಿಘ್ನಗಳಿಗೆ ಪರಿಹಾರರೂಪವಾಗಿರುತ್ತದೆ' ಎಂದು ಸೂಚಿಸುವುದಕ್ಕಾಗಿ.

## ವಿಘ್ನಗಳಿಗೆ ಅನುಗುಣವಾಗಿ ಮಂಗಳ

ಮಂದಾರಮಂಜರೀ–

तेन क्वचिन्मङ्गळे कृतेऽपि प्रारिप्सितपरिसमाप्त्यदर्शनान्मङ्गळं न परिसमाप्त्यादिहेतुरिति शङ्का निरस्ता । तत्र विघ्नानां भूयस्त्वान्मङ्गळस्याल्पीयस्त्वादिति भावः ।।

ತೇನ ಕ್ವಚಿನ್ಮಂಗಳೇ ಕೃತೇಽಪಿ ಪ್ರಾರಿಪ್ಸಿತಪರಿಸಮಾಪ್ತ್ಯದರ್ಶನಾತ್ ಮಂಗಳಂ

ನ ಪರಿಸಮಾಪ್ತ್ಯಾದಿಹೇತುರಿತಿ ಶಂಕಾ ನಿರಸ್ತಾ । ತತ್ರ ವಿಘ್ನಾನಾಂ ಭೂಯಸ್ತ್ವಾತ್ ಮಂಗಳಸ್ಯಾಲ್ಪೀಯಸ್ತ್ವಾತ್ ಇತಿ ಭಾವಃ।

ಇದರಿಂದ ಕೆಲವೊಂದು ಗ್ರಂಥಗಳಲ್ಲಿ ಮಂಗಳಾಚರಣೆಯು ಇದ್ದರೂ ಸಹ ಪ್ರಾರಿಪ್ಸಿತಗ್ರಂಥದ ಪರಿಸಮಾಪ್ತಿಯು ಇರುವುದಿಲ್ಲ, ಆದ್ದರಿಂದ ಮಂಗ-ಳಾಚರಣೆಯು ಗ್ರಂಥದ ಪರಿಸಮಾಪ್ತಿಗೆ ಹೇತುವಲ್ಲವೆಂಬ ಆಶಂಕೆಯನ್ನು ಪರಿಹರಿಸಿದಂತಾಯಿತು. ಯಾವ ಗ್ರಂಥದಲ್ಲಿ ಪರಿಸಮಾಪ್ತಿಯಾಗಿರುವು-ದಿಲ್ಲವೋ ಅಂತಹ ಗ್ರಂಥಗಳಲ್ಲಿ ವಿಘ್ನಗಳೇ ಹೆಚ್ಚಾಗಿರುತ್ತವೆ. ಮಂಗಳಾ-ಚರಣೆಯು ಅಲ್ಪವಾಗಿರುತ್ತದೆ. ಆದ್ದರಿಂದ ಬಹುತರವಾದ ವಿಘ್ನಪರಿಹಾರಕ್ಕೆ ಬಹುತರವಾದ ಮಂಗಳಾಚರಣೆಯು ಎಂಬ ಕಾರಣವು ಇಲ್ಲದ ಪ್ರಯುಕ್ತ ಗ್ರಂಥವು ಸಮಾಪ್ತವಾಗಿರುವುದಿಲ್ಲವೆಂದು ತಿಳಿಯಬೇಕು.

## ಶ್ರೀಹರಿ ಅಗಣ್ಯಗುಣಾಶ್ರಯ

ಮಂದಾರಮಂಜರೀ–

**मुख्याश्रयेति** ।। अन्येषां बहुगुणाश्रयत्वमात्रेण अगण्यगुणाश्रयत्व-मौपचारिकम् । अस्य तु मुख्यमित्यर्थः ।

ಮುಖ್ಯಾಶ್ರಯೇತಿ ॥ ಅನ್ಯೇಷಾಂ ಬಹುಗುಣಾಶ್ರಯತ್ವಮಾತ್ರೇಣ ಅಗಣ್ಯ-ಗುಣಾಶ್ರಯತ್ವಮ್ ಔಪಚಾರಿಕಮ್ । ಅಸ್ಯ ತು ಮುಖ್ಯಮಿತ್ಯರ್ಥಃ।

ಸಮಸ್ತವಾದ ಅಗಣ್ಯಗುಣಗಳಿಗೆ ಮುಖ್ಯವಾಗಿ ಆಶ್ರಯನಾದವನು ಪರ-ಮಾತ್ಮನೇ ಆಗಿರುತ್ತಾನೆ. ಬೇರೆಯವರು ಬಹುತರವಾದ ಗುಣಗಳಿಗೆ ಆಶ್ರಯ-ರಾಗಿರುತ್ತಾರಾದ್ದರಿಂದ ಅಗಣ್ಯಗುಣಾಶ್ರಯತ್ವವನ್ನು ಔಪಚಾರಿಕವಾಗಿ ಹೊಂದಿರುತ್ತಾರೆ. ಆದರೆ ಪರಮಾತ್ಮನಲ್ಲಿರುವ ಅಗಣ್ಯಗುಣಾಶ್ರಯತ್ವವು ಮುಖ್ಯವಾಗಿಯೇ ಇರುತ್ತದೆಂದು ತಿಳಿಯಬೇಕು.

## ಆಶ್ರಯ ಆಶ್ರಯೀಭಾವ ಹೇಗೆ?

ಮಂದಾರಮಂಜರೀ–

यद्यपि गुणगुणिनोरत्यन्ताभेदः । तथापि विशेषबलादाश्रयाश्रयिभावो द्रष्टव्यः । विशेषस्वरूपं च विवेचयिष्यामः ।।

**ಯದ್ಯಪಿ ಗುಣಗುಣಿನೋರತ್ಯಂತಾಭೇದಃ । ತಥಾಪಿ ವಿಶೇಷಬಲಾತ್ ಆಶ್ರಯಾಶ್ರಯಿಭಾವೋ ದ್ರಷ್ಟವ್ಯಃ। ವಿಶೇಷಸ್ವರೂಪಂ ಚ ವಿವೇಚಯಿಷ್ಯಾಮಃ।**

ವಾಸ್ತವಿಕವಾಗಿ ಗುಣ ಹಾಗೂ ಗುಣಿಗಳಿಗೆ ಅಭೇದವೇ ಇರುತ್ತದೆ. ಆದರೆ ವಿಶೇಷದ ಬಲದಿಂದ ಆಶ್ರಯಾಶ್ರಯೀಭಾವವನ್ನು ಪರಮಾತ್ಮನಲ್ಲಿ ಕೂಡಿಸ-ಬೇಕು. ವಿಶೇಷದ ಬಗ್ಗೆ ಮುಂದೆ ವಿಚಾರ ಮಾಡುತ್ತೇವೆ.

## ರಮಾಕಾಂತನ ಪ್ರೀತಿಗೆ ಮುಖ್ಯಪಾತ್ರರು

ಮಂದಾರಮಂಜರೀ–

**अभ्यर्हितत्वेनेति** ।। कमलाविशिष्टनारायणप्रीतेः स्वस्यैव मुख्य-पात्रत्वात् मुख्ये सम्भवत्यमुख्यायोगादित्यर्थः ।

**ಅಭ್ಯರ್ಹಿತತ್ವೇನೇತಿ ॥ ಕಮಲಾವಿಶಿಷ್ಟನಾರಾಯಣಪ್ರೀತೇಃ ಸ್ವಸ್ಯೈವ ಮುಖ್ಯ -ಪಾತ್ರತ್ವಾತ್ ಮುಖ್ಯೇ ಸಂಭವತಿ ಅಮುಖ್ಯಾಯೋಗಾತ್ ಇತ್ಯರ್ಥಃ।**

ಲಕ್ಷ್ಮೀಸಹಿತನಾದ ಪರಮಾತ್ಮನ ಪ್ರೀತಿಗೆ ತಾವೇ ಮುಖ್ಯಪಾತ್ರರಾಗಿ-ದ್ದಾರೆ. ಹೀಗೆ ಮುಖ್ಯಾರ್ಥವನ್ನು ವಿವಕ್ಷಿಸಲು ಬರುವಾಗ, ಅಮುಖ್ಯಾರ್ಥವನ್ನು ವಿವಕ್ಷಿಸಬಾರದು.

**ಗಮನಿಸಿ**

ಭಗವಂತನ ಮುಖ್ಯಪ್ರೀತಿಗೆ ಪಾತ್ರರಾದವರು ಶ್ರೀಮದಾಚಾರ್ಯರು ಮಾತ್ರ. ಬೇರೆ ಯಾರೂ ಪಾತ್ರರಲ್ಲ.

## ಯಾರಲ್ಲಿ ಪ್ರೀತಿ?

ಮಂದಾರಮಂಜರೀ–

अथ वा असति विशेषे स्वाभिलष्यमाणेनेष्टेन अन्तरङ्गतया स्वस्यैव सम्बन्धदर्शनादित्यर्थः ।

ಅಥವಾ ಅಸತಿ ವಿಶೇಷೇ ಸ್ವಾಭಿಲಷ್ಯಮಾಣೇನೇಷ್ಟೇನ ಅಂತರಂಗ- ತಯಾ ಸ್ವಸ್ಯೈವ ಸಂಬಂಧದರ್ಶನಾದಿತ್ಯರ್ಥಃ।

ಅಥವಾ ಅಭಿಲಷಿತವಾದ ಇಷ್ಟವು ತಮಗೆ ದೊರಕಲಿ ಎಂಬ ಅಪೇಕ್ಷೆಯು ಎಲ್ಲರಿಗೂ ಇರುತ್ತದೆ. ಆದ್ದರಿಂದ ಭಗವಂತನ ಪ್ರೀತಿಯು ತಮ್ಮ ವಿಷಯದಲ್ಲಿ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

## ಪ್ರಕೃತರಾದವರು ಯಾರು?

ಮಂದಾರಮಂಜರೀ–

यद्वा 'भिक्षां देहि' इत्यादाविव वाक्यप्रयोक्तृत्वेन स्वस्यैव प्रकृतत्वादित्यर्थः ।।

ಯದ್ವಾ 'ಭಿಕ್ಷಾಂ ದೇಹಿ' ಇತ್ಯಾದಾವಿವ ವಾಕ್ಯಪ್ರಯೋಕ್ತೃತ್ವೇನ ಸ್ವಸ್ಯೈವ ಪ್ರಕೃತತ್ವಾದಿತ್ಯರ್ಥಃ।

ಅಥವಾ 'ಭಿಕ್ಷಾಂ ದೇಹಿ' ಎಂದು ಯಾರು ವಾಕ್ಯಪ್ರಯೋಗ ಮಾಡುತ್ತಾನೋ, ಅವನು ತನಗೇ ಭಿಕ್ಷೆಯನ್ನು ನೀಡಬೇಕೆಂಬ ಉದ್ದೇಶವನ್ನು ಹೊಂದಿರುತ್ತಾನೆ.

## 'ಸ್ತುತ್ಯರ್ಥಮಪಿ' ಎಂಬಲ್ಲಿ 'ಅಪಿ'ಪದಾರ್ಥ

ಮಂದಾರಮಂಜರೀ–

**अत्राद्यमिति** ।। न चोभयत्र तात्पर्ये वाक्यभेदः शङ्क्यः । स्तुतौ तात्पर्येण विशेषणद्वये उत्तरग्रन्थारम्भोपपादनस्य प्रासङ्गिकत्वादिति अपिशब्दार्थः ।

## ವಿಶೇಷಣಗಳಿಗೆ ಎರಡು ಪ್ರಯೋಜನ

**ಅತ್ರಾದ್ಯಮಿತಿ ॥ ನ ಚೋಭಯತ್ರ ತಾತ್ಪರ್ಯೇ ವಾಕ್ಯಭೇದಃ ಶಂಕ್ಯಃ । ಸ್ತುತೌ ತಾತ್ಪರ್ಯೇಣ ವಿಶೇಷಣದ್ವಯೇ ಉತ್ತರಗ್ರಂಥಾರಂಭೋಪಪಾದನಸ್ಯ ಪ್ರಾಸಂಗಿಕತ್ವಾದಿತಿ ಅಪಿಶಬ್ದಾರ್ಥಃ।**

ಮಂಗಳಶ್ಲೋಕದಲ್ಲಿರುವ ವಿಶೇಷಣಗಳಿಗೆ ಎರಡು ಬಗೆಯ ತಾತ್ಪರ್ಯ-ವಿದೆ. ಒಂದು ಸ್ತೋತ್ರಮಾಡುವಿಕೆ ಮತ್ತೊಂದು ಮುಂದಿನ ಗ್ರಂಥಕ್ಕೆ ಉಪ-ಷ್ಟಂಭಕವಾಗುವಿಕೆ. ಈ ಎರಡು ಉದ್ದೇಶವನ್ನು ಹೇಳಿದರೆ ವಾಕ್ಯಭೇದ-ದೋಷ ಬರುತ್ತದಲ್ಲವೇ? ಎಂದು ಶಂಕಿಸಬಾರದು. ಸ್ತೋತ್ರದಲ್ಲಿ ತಾತ್ಪರ್ಯ ಹೊಂದಿರುವ ಎರಡು ವಿಶೇಷಣಗಳು ಉತ್ತರಗ್ರಂಥಕ್ಕೆ ಉಪಷ್ಟಂಭಕವಾಗಿದೆ ಎಂದು ಹೇಳಿದ್ದು ಕೇವಲ ಪ್ರಾಸಂಗಿಕ. ಆದ್ದರಿಂದ ಸ್ತೋತ್ರ ಮಾಡುವುದೇ ಈ ವಿಶೇಷಣದ ಮುಖ್ಯ ಪ್ರಯೋಜನವೆಂದು ತಿಳಿಯಬೇಕು.

## ದೋಷಪರಿಹಾರಕ್ಕಾಗಿ ಎರಡನೆಯ ಲಕ್ಷಣ

ಮಂದಾರಮಂಜರೀ–

पक्षान्तरमाह– **अथवेति** ।। यद्यपि एकेनैव लक्षणेन वस्तुसिद्धिः ।

तथापि एकलक्षणोपपादनायान्यस्मिन् कथिते अव्याप्त्याद्यभावात्तदपि लक्षणं भवतीत्यर्थः ।।

**ಪಕ್ಷಾಂತರಮಾಹ – ಅಥವೇತಿ ॥ ಯದ್ಯಪಿ ಏಕೇನೈವ ಲಕ್ಷಣೇನ ವಸ್ತು-ಸಿದ್ಧಿಃ । ತಥಾಪಿ ಏಕಲಕ್ಷಣೋಪಪಾದನಾಯ ಅನ್ಯಸ್ಮಿನ್ ಕಥಿತೇ ಅವ್ಯಾಪ್ತ್ಯಾ-ದ್ಯಭಾವಾತ್ ತದಪಿ ಲಕ್ಷಣಂ ಭವತೀತ್ಯರ್ಥಃ।**

ಅಥವಾ ಮತ್ತೊಂದು ಬಗೆಯಲ್ಲಿ ಉತ್ತರಿಸುತ್ತಿದ್ದಾರೆ 'ಅಥವಾ' ಇತ್ಯಾದಿ -ಯಾಗಿ. ವಾಸ್ತವಿಕವಾಗಿ ಒಂದು ಲಕ್ಷಣವನ್ನು ಹೇಳಿದರೆ ಸಾಕು ವಸ್ತುವಿನ ನಿರ್ಧಾರವಾಗುತ್ತದೆ. ಆದರೆ ಅಗಣ್ಯಗುಣಾಶ್ರಯತ್ವವೆಂಬ ಒಂದು ಲಕ್ಷಣವನ್ನು ಸಮರ್ಥಿಸುವುದಕ್ಕಾಗಿ ದೋಷದೂರತ್ವವೆಂಬ ಮತ್ತೊಂದು ಲಕ್ಷಣವನ್ನು ಹೇಳಿದ್ದಾರೆ. ಆ ಲಕ್ಷಣವು ಅವ್ಯಾಪ್ತ್ಯಾದಿ ದೋಷಗಳಿಂದ ರಹಿತವಾದ ಕಾರಣ ಅದು ಕೂಡ ಲಕ್ಷಣವೇ ಆಗುತ್ತದೆಂದು ತಿಳಿಯಬೇಕು.

## ತತ್ವವಾದದಲ್ಲಿ ಅನುಬಂಧಚತುಷ್ಟಯ

ಶ್ರೀನಿವಾಸತೀರ್ಥೀಯ –

एवं विषयाद्याभासस्य प्रसक्तत्वात्तन्निराकरणेन स्वाभिमत-विषयादिसमर्थनार्थमेतत्प्रकरणारम्भो युक्त एवेत्याह ।। **तमेतमिति ।।**

ಏವಂ ವಿಷಯಾದ್ಯಾಭಾಸಸ್ಯ ಪ್ರಸಕ್ತತ್ವಾತ್ ತನ್ನಿರಾಕರಣೇನ ಸ್ವಾಭಿ-ಮತವಿಷಯಾದಿಸಮರ್ಥನಾರ್ಥಮ್ ಏತತ್ ಪ್ರಕರಣಾರಂಭೋ ಯುಕ್ತ ಏವೇತ್ಯಾಹ – ತಮೇತಮಿತಿ ॥

ಇಲ್ಲಿಯ ತನಕ ವಿಷಯಾಭಾಸ, ಪ್ರಯೋಜನಾಭಾಸ ಮೊದಲಾದವುಗಳನ್ನು ಏನೆಂದು ತೋರಿಸಿದರು. ಪ್ರಕೃತ ಅವರು ಹೇಳುವ ವಿಷಯಾದ್ಯಾಭಾಸಗಳನ್ನು ನಿರಾ-ಕರಣೆ ಮಾಡುವುದಕ್ಕಾಗಿ ಮತ್ತು ತತ್ವವಾದಿಗಳು ನಿರೂಪಣೆ ಮಾಡುವ ವಿಷಯ-

ಪ್ರಯೋಜನಾದಿಗಳನ್ನು ಸಮರ್ಥಿಸುವುದಕ್ಕಾಗಿ ಈ ಉಪಾಧಿಖಂಡನ ಎಂಬ ಪ್ರಕರಣ-ಗ್ರಂಥವು ಪ್ರಾರಂಭವಾಗುತ್ತಿದೆ. ಮತ್ತು ಅತ್ಯಂತ ಸಾರ್ಥಕವಾಗಿದೆ ಎಂಬುದಾಗಿ 'ತಮೇತಂ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

## ವಿಷಯಾದಿಗಳ ಉಲ್ಲೇಖ

ಶ್ರೀನಿವಾಸತೀರ್ಥೀಯ –

**स्वाभिमतमिति** । गुणपूर्णो निर्दोषो भगवान्विषयः । तज्ज्ञानं **मोक्षश्च प्रयोजनम्** । योग्यस्तदिच्छुरधिकारी । यथायोग्यं सम्बन्ध इति **स्वाभिमतमित्यर्थः** ।

**ಸ್ವಾಭಿಮತಮಿತಿ ॥ ಗುಣಪೂರ್ಣೋ ನಿರ್ದೋಷೋ ಭಗವಾನ್ ವಿಷಯಃ। ತಜ್ಜ್ಞಾನಂ ಮೋಕ್ಷಶ್ಚ ಪ್ರಯೋಜನಮ್ । ಯೋಗ್ಯಃ ತದಿಚ್ಛುಃ ಅಧಿಕಾರೀ। ಯಥಾಯೋಗ್ಯಂ ಸಂಬಂಧಃ ಇತಿ ಸ್ವಾಭಿಮತಮ್ ಇತ್ಯರ್ಥಃ।**

ನಮಗೆ ಸಮ್ಮತವಾದ ವಿಷಯಾದಿಗಳು ಹೀಗಿವೆ – ಗುಣಪೂರ್ಣನಾದ, ದೋಷ-ರಹಿತನಾದ ಭಗವಂತನೇ ವಿಷಯನು. ಅವನ ಜ್ಞಾನ ಹಾಗೂ ಮೋಕ್ಷ ಇವೆರಡು ಪ್ರಯೋಜನ. ಜ್ಞಾನಕ್ಕೆ ಯೋಗ್ಯನಾದವನು ಮತ್ತು ಮೋಕ್ಷವನ್ನು ಬಯಸುವವನು ಗ್ರಂಥಾಧ್ಯಯನಕ್ಕೆ ಅಧಿಕಾರಿಯು. ಜ್ಞಾತೃ, ಜ್ಞೇಯ, ಪ್ರಯೋಜ್ಯ, ಪ್ರಯೋಜಕ ಮೊದಲಾದವುಗಳೇ ಸಂಬಂಧಗಳು. ಹೀಗೆ ವಿಷಯಾದಿಗಳನ್ನು 'ಸ್ವಾಭಿಮತಂ' ಎಂಬುದರಿಂದ ತಿಳಿಯಬೇಕು.

## ಮಂಗಳಶ್ಲೋಕದ ವ್ಯಾಖ್ಯಾನ

ಶ್ರೀನಿವಾಸತೀರ್ಥೀಯ –

**नित्यशब्दार्थस्सदेति** । एकशब्दार्थो **मुख्येति** । निलयशब्दार्थ **आश्रय** इति । **मूर्तिः** शरीरम् । कण्ठतोनुक्तौ निमित्तमाह – **अभ्य-**

**र्हितत्वेनेति। कमलाविशिष्टनारायणप्रीतेः स्वस्यैव मुख्यपात्रत्वेन स्वेषामिति सिद्धत्वात् प्रमितत्वादित्यर्थः ।**

**ನಿತ್ಯಶಬ್ದಾರ್ಥಃ ಸದೇತಿ ॥ ಏಕಶಬ್ದಾರ್ಥೋ ಮುಖ್ಯೇತಿ । ನಿಲಯಶಬ್ದಾರ್ಥಃ ಆಶ್ರಯ ಇತಿ । ಮೂರ್ತಿಃ ಶರೀರಮ್ । ಕಂಠತೋಽನುಕ್ತೌ ನಿಮಿತ್ತಮಾಹ – ಅಭ್ಯರ್ಹಿತತ್ವೇನೇತಿ । ಕಮಲಾವಿಶಿಷ್ಟನಾರಾಯಣಪ್ರೀತೇಃ ಸ್ವಸ್ಯೈವ ಮುಖ್ಯ-ಪಾತ್ರತ್ವೇನ ಸ್ವೇಷಾಮಿತಿ ಸಿದ್ಧತ್ವಾತ್ ಪ್ರಮಿತತ್ವಾದಿತ್ಯರ್ಥಃ ।**

ಶ್ರೀಮದಾಚಾರ್ಯರ ಮಂಗಳಶ್ಲೋಕದಲ್ಲಿರುವ 'ನಿತ್ಯ' ಎಂಬ ಪದದ ಅರ್ಥ-ವನ್ನೇ ಟೀಕೆಯಲ್ಲಿ 'ಸದಾ' ಎಂಬ ಪದದಿಂದ ಹೇಳಿರುತ್ತಾರೆ. 'ಏಕ'ಶಬ್ದದ ಅರ್ಥವನ್ನು 'ಮುಖ್ಯ' ಎಂದು ಹೇಳಿರುತ್ತಾರೆ. 'ನಿಲಯ'ಶಬ್ದದ ಅರ್ಥವನ್ನು 'ಆಶ್ರಯಃ' ಎಂದು ಹೇಳಿದ್ದಾರೆ. ಮೂರ್ತಿಃ ಎಂದರೆ ಶರೀರ ಎಂದರ್ಥ.

ಶ್ರೀಮದಾಚಾರ್ಯರು ಗ್ರಂಥದಲ್ಲಿ ಯಾರ ವಿಷಯದಲ್ಲಿ ಭಗವಂತನು ಪ್ರೀತ-ನಾಗಬೇಕೆಂದು ಹೇಳಿರುವುದಿಲ್ಲ. ಅರ್ಥಾತ್ ತಮ್ಮ ವಿಷಯದಲ್ಲಿ ಪ್ರೀತನಾಗಬೇಕೆಂದು ತಿಳಿಯುತ್ತದೆ. ಹಾಗಾದರೆ 'ಅಸ್ಮಾಕಂ' ಎಂದು ಹೇಳಬೇಕಿತ್ತಲ್ಲವೇ? ಇದನ್ನು ಹೇಳ-ದಿರಲು ಕಾರಣವೇನು? ಎಂಬ ಪ್ರಶ್ನೆಗೆ 'ಅಭ್ಯರ್ಹಿತತ್ವೇನ' ಎಂಬ ಪದದಿಂದ ಟೀಕೆಯಲ್ಲಿ ಉತ್ತರ ನೀಡಿದ್ದಾರೆ. ಲಕ್ಷ್ಮೀದೇವಿಯಿಂದ ಸಹಿತನಾದ ನಾರಾಯಣನ ಪ್ರೀತಿಗೆ ಮುಖ್ಯಪಾತ್ರರಾದವರು ತಾವೇ ಆಗಿದ್ದಾರೆ. (ಶ್ರೀಮದಾಚಾರ್ಯರೇ ಆಗಿ-ರುತ್ತಾರೆ). ಈ ವಿಷಯವು ಪ್ರಮಿತವಾಗಿರುವುದರಿಂದ ಪ್ರತ್ಯೇಕವಾಗಿ 'ಅಸ್ಮಾಕಂ' ಎಂದು ಹೇಳಿರುವುದಿಲ್ಲ.

### ಕರ್ತೃವಾಚಕಪದ ಅನಾವಶ್ಯಕ

ಶ್ರೀನಿವಾಸತೀರ್ಥೀಯ –

**यद्वा यथा भिक्षां देहीत्यादौ वाक्यप्रयोक्तृतया स्वस्यैव प्रकृतत्वेन सिद्धत्वान्ममेति नोच्यते । एवमिहापि प्रीयतामिति वाक्यप्रयोक्तृत्वेन**

**स्वेषामिति प्रकृतत्वेन सिद्धत्वादस्माकमिति नोक्तमित्यर्थः ।**

**ಯದ್ವಾ, ಯಥಾ 'ಭಿಕ್ಷಾಂ ದೇಹಿ' ಇತ್ಯಾದೌ ವಾಕ್ಯಪ್ರಯೋಕ್ತೃತಯಾ ಸ್ವಸ್ಯೈವ ಪ್ರಕೃತತ್ವೇನ ಸಿದ್ಧತ್ವಾತ್ 'ಮಮ' ಇತಿ ನೋಚ್ಯತೇ । ಏವಮ್ ಇಹಾಪಿ 'ಪ್ರೀಯತಾಮ್' ಇತಿ ವಾಕ್ಯಪ್ರಯೋಕ್ತೃತ್ವೇನ 'ಸ್ವೇಷಾಮ್' ಇತಿ ಪ್ರಕೃತತ್ವೇನ ಸಿದ್ಧತ್ವಾತ್ 'ಅಸ್ಮಾಕಮ್' ಇತಿ ನೋಕ್ತಮಿತ್ಯರ್ಥಃ।**

ಅಥವಾ ಮತ್ತೊಂದು ಬಗೆಯಲ್ಲಿ ಸಮಾಧಾನವನ್ನು ತಿಳಿಯಬಹುದು. 'ಭಿಕ್ಷೆಯನ್ನು ನೀಡಿರಿ' ಎಂದು ಹೇಳಿದಾಗ ತನಗೇ ಭಿಕ್ಷೆಯನ್ನು ಕೊಡಬೇಕೆಂದೇ ಪ್ರಾರ್ಥನೆ ಮಾಡುವ ವ್ಯಕ್ತಿಯ ಉದ್ದೇಶವಾಗಿರುತ್ತದೆ. ಪುನಃ ಪ್ರತ್ಯೇಕವಾಗಿ 'ನನಗೆ' ಎಂಬ ಪದವನ್ನು ಭಿಕ್ಷುಕನು ಉಪಯೋಗಿಸಬೇಕಾಗಿಲ್ಲ. ಅದರಂತೆ 'ಭಗವಂತನು ಪ್ರೀತನಾಗಲಿ' ಎಂದು ಯಾವ ವ್ಯಕ್ತಿಯು ವಾಕ್ಯವನ್ನು ಪ್ರಯೋಗಿಸುತ್ತಾನೋ, ಅವನ ವಿಷಯದಲ್ಲಿಯೇ ಭಗವಂತನು ಪ್ರೀತನಾಗಲಿ ಎಂದರ್ಥ. ಆದ್ದರಿಂದ ಅಸ್ಮಾಕಂ ಎಂಬ ಪದವನ್ನು ಪ್ರಯೋಗ ಮಾಡದಿದ್ದರೂ ಸಹ ತಮ್ಮ ವಿಷಯದಲ್ಲಿ ಭಗವಂತನು ಪ್ರೀತನಾಗಲಿ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಉದ್ದೇಶದಿಂದಲೂ ಶ್ರೀಮದಾಚಾರ್ಯರು 'ಅಸ್ಮಾಕಂ' ಎಂಬ ಪದವನ್ನು ಪ್ರಯೋಗಿಸಿಲ್ಲ.

## ಎರಡು ವಿಶೇಷಣಗಳಿಂದ ಸ್ತುತಿಗೆ ಪ್ರಯೋಜನ

**ಶ್ರೀನಿವಾಸತೀರ್ಥೀಯ –**

**नन्वगण्यगुणेत्यादिविशेषणद्वयं किमर्थमिति चेत् । स्तुत्यर्थमिति ब्रूमः। तर्हि जगजन्मादिकर्तृत्वादिरूपविशेषणान्तरेणापि स्तुतिसम्भवादगण्यगुणेत्यादिविशेषणद्वयेनैव स्तुतौ किं प्रयोजनमित्यत आह – अत्राद्यमिति ।।**

**ನನು 'ಅಗಣ್ಯಗುಣ' ಇತ್ಯಾದಿವಿಶೇಷಣದ್ವಯಂ ಕಿಮರ್ಥಮ್? ಇತಿ ಚೇತ್। ಸ್ತುತ್ಯರ್ಥಮ್ ಇತಿ ಬ್ರೂಮಃ । ತರ್ಹಿ ಜಗಜ್ಜನ್ಮಾದಿಕರ್ತೃತ್ವಾದಿರೂಪ-**

**ವಿಶೇಷಣಾಂತರೇಣಾಪಿ ಸ್ತುತಿಸಂಭವಾದಗಣ್ಯಗುಣೇತ್ಯಾದಿವಿಶೇಷಣದ್ವಯೇ -ನೈವ ಸ್ತುತೌ ಕಿಂ ಪ್ರಯೋಜನಮ್? ಇತ್ಯತ ಆಹ – ಅತ್ರಾದ್ಯಮಿತಿ ॥**

ಮಂಗಳಾಚರಣೆಯ ಶ್ಲೋಕದಲ್ಲಿ 'ಅಗಣ್ಯಗುಣನಿತ್ಯೈಕನಿಲಯಾಕೃತಿಃ' ಎಂದೂ, 'ಅಶೇಷದೋಷರಹಿತಃ' ಎಂದೂ ಎರಡು ವಿಶೇಷಣಗಳನ್ನು ನಾರಾಯಣನಲ್ಲಿ ಹೇಳಿ-ರುತ್ತಾರೆ. ಭಗವಂತನನ್ನು ಸ್ತೋತ್ರಮಾಡುವುದಕ್ಕಾಗಿ ಈ ವಿಶೇಷಣಗಳನ್ನೇ ಏಕೆ ಹೇಳಿರುತ್ತಾರೆ? ಹಾಗೆ ಸ್ತೋತ್ರ ಮಾಡುವ ಉದ್ದೇಶವೇ ಇರುವುದಾದಲ್ಲಿ ಜಗಜ್ಜನ್ಮಾದಿ-ಕರ್ತೃತ್ವ ಇವೇ ಮೊದಲಾದ ವಿಶೇಷಣಗಳಿಂದಲೂ ಸ್ತುತಿಸಲು ಬರುತ್ತದೆ. ಹೀಗಿರುವಾಗ ಅಗಣ್ಯಗುಣ ಇತ್ಯಾದಿ ವಿಶೇಷಣಗಳಿಂದಲೇ ಸ್ತುತಿಸಲು ಏನು ಕಾರಣ? ಮತ್ತು ಹೀಗೆ ಸ್ತೋತ್ರ ಮಾಡುವುದರ ಪ್ರಯೋಜನವೇನು? ಎಂಬ ಪ್ರಶ್ನೆಗಳಿಗೆ 'ಅತ್ರಾದ್ಯಂ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

## ಭಗವಂತನ ಸ್ವರೂಪಪರಿಚಯ

ಶ್ರೀನಿವಾಸತೀರ್ಥೀಯ –

**उत्तरेति** । उत्तरप्रबन्धस्योत्तरग्रन्थस्य प्रसङ्गः प्रसक्तिः तस्योपक्षेपाय प्रारम्भायेत्यर्थः । एतल्लक्षणद्वयस्य नारायणस्वरूपनिर्धारणहेतुत्वेऽनुव्याख्यानसम्मतिमाह ।। **यथोक्तमिति** ।

**ಉತ್ತರೇತಿ ॥ ಉತ್ತರಪ್ರಬಂಧಸ್ಯೋತ್ತರಗ್ರಂಥಸ್ಯ ಪ್ರಸಂಗಃ ಪ್ರಸಕ್ತಿಃ ತಸ್ಯೋ-ಪಕ್ಷೇಪಾಯ ಪ್ರಾರಂಭಾಯ ಇತ್ಯರ್ಥಃ। ಏತಲ್ಲಕ್ಷಣದ್ವಯಸ್ಯ ನಾರಾಯಣ-ಸ್ವರೂಪನಿರ್ಧಾರಣಹೇತುತ್ವೇ ಅನುವ್ಯಾಖ್ಯಾನಸಮ್ಮತಿಮಾಹ – ಯಥೋಕ್ತ-ಮಿತಿ ॥**

ಈ ಎರಡೂ ವಿಶೇಷಣಗಳನ್ನೇ ಹೇಳಲು ಕಾರಣವಿದೆ. ಮುಂದಿನ ಪ್ರಬಂಧರೂಪ-ವಾದ ಗ್ರಂಥಕ್ಕೆ ಪ್ರಸಂಗವನ್ನು ತಿಳಿಸುವ ಅಭಿಪ್ರಾಯದಿಂದ 'ಉತ್ತರಪ್ರಬಂಧಸ್ಯೋ-ತ್ತರಗ್ರಂಥಸ್ಯ ಪ್ರಸಂಗಃ ಪ್ರಸಕ್ತಿಃ ತಸ್ಯೋಪಕ್ಷೇಪಾಯ' ಎಂದು ಟೀಕೆಯಲ್ಲಿ ಹೇಳಿ-ರುತ್ತಾರೆ. ಈ ಎರಡೂ ಲಕ್ಷಣಗಳು ನಾರಾಯಣನ ಸ್ವರೂಪವನ್ನು ನಿರ್ಧಾರಮಾಡುತ್ತಿವೆ

ಎನ್ನಲು ಮುಖ್ಯವಾದ ಕಾರಣಗಳೇನೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆಂದು 'ಯಥೋಕ್ತಂ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ.

**ವಿವರಣೆ** – 'ಅಗಣ್ಯಗುಣನಿತ್ಯೈಕನಿಲಯಾಕೃತಿಃ' 'ಅಶೇಷದೋಷರಹಿತಃ' ಈ ಎರಡು ವಿಶೇಷಣಗಳು ಭಗವಂತನನ್ನು ಸ್ತುತಿಸುತ್ತಿವೆ. ಜೊತೆಯಲ್ಲಿ ಮುಂದಿನ ಗ್ರಂಥದ ಪ್ರಾರಂಭಕ್ಕೆ ಪೀಠಿಕೆಯನ್ನು ಕೂಡ ರಚಿಸುತ್ತಿವೆ. ಅದು ಹೀಗೆ – ಭಗವಂತನು ಸಮಸ್ತಗುಣಪರಿಪೂರ್ಣನಾಗಿದ್ದಾನೆ. ಹಾಗೂ ದೋಷವಿದೂರ-ನಾಗಿದ್ದಾನೆಂದು ಹೇಳಿದರೆ ಜೀವಬ್ರಹ್ಮರಿಗೆ ಐಕ್ಯವೇ ಕೂಡುವುದಿಲ್ಲ. ಆದ್ದರಿಂದ ಮಾಯಾವಾದಿಗಳು ಭಗವಂತನಿಗೆ ಅಗಣ್ಯಗುಣಾಶ್ರಯತ್ವವನ್ನು ಹೇಳುವುದು ಅಸಾಧುವಾಗಿದೆ ಎಂದು ಆಕ್ಷೇಪಮಾಡುತ್ತಾರೆ. ಈ ಆಕ್ಷೇಪಕ್ಕೆ ಉತ್ತರವನ್ನು ನೀಡಲು ಮುಂದಿನ ಗ್ರಂಥವು ಹೊರಡುತ್ತದೆ. ಒಂದು ವೇಳೆ ಬೇರೆ ವಿಶೇಷಣ-ಗಳನ್ನು ಪರಮಾತ್ಮನಿಗೆ ಹೇಳಿದರೆ ಈ ಜೀವಬ್ರಹ್ಮರಿಗೆ ಐಕ್ಯವು ಕೂಡುವುದಿಲ್ಲ ಎಂಬ ಆಕ್ಷೇಪವೇ ಹುಟ್ಟುವುದಿಲ್ಲ. ಆದ್ದರಿಂದ ಈ ಎರಡು ವಿಶೇಷಣಗಳಿಂದಲೇ ಸ್ತೋತ್ರವನ್ನು ಮಾಡಿರುತ್ತಾರೆ.

## 'ಈಶ್ವರ'ಪದಪ್ರಯೋಗದ ಸ್ವಾರಸ್ಯ

ಶ್ರೀನಿವಾಸತೀರ್ಥೀಯ –

व्याख्यातं च सुधायाम् । कियती सीमा परमात्मत्वस्येत्यत आह । **अत इति** । अशेषगुणोन्नद्धत्वं निर्दोषत्वं च प्रत्येकं निर्धारणहेतुत्वेनोक्तम् । स्वमते ब्रह्मण ईश्वरातिरिक्तस्याभावं सूचयितुम् **ईश्वर** इत्युक्तम् ।

ವ್ಯಾಖ್ಯಾತಂ ಚ ಸುಧಾಯಾಮ್ । ಕಿಯತೀ ಸೀಮಾ ಪರಮಾತ್ಮತ್ವಸ್ಯ' ಇತ್ಯತ ಆಹ – ಅತ ಇತಿ ॥ ಅಶೇಷಗುಣೋನ್ನದ್ಧತ್ವಂ ನಿರ್ದೋಷತ್ವಂ ಚ ಪ್ರತ್ಯೇಕಂ ನಿರ್ಧಾರಣಹೇತುತ್ವೇನೋಕ್ತಮ್ । ಸ್ವಮತೇ ಬ್ರಹ್ಮಣ ಈಶ್ವರಾತಿರಿಕ್ತಸ್ಯಾ-ಭಾವಂ ಸೂಚಯಿತುಮ್ ಈಶ್ವರ ಇತ್ಯುಕ್ತಮ್ ।

ಅನುವ್ಯಾಖ್ಯಾನದ ಈ ಶ್ಲೋಕವನ್ನು ಶ್ರೀಮನ್ನ್ಯಾಯಸುಧೆಯಲ್ಲಿ ಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ. ಪರಮಾತ್ಮನ ಮಹಿಮೆ ಎಷ್ಟು? ಎಂಬ ಪ್ರಶ್ನೆಗೆ 'ಅತೋಽ-ಶೇಷಗುಣೋನ್ನದ್ಧಂ' ಎಂಬ ಶ್ಲೋಕವೇ ಉತ್ತರಿಸುತ್ತದೆ.

ಅಶೇಷಗುಣಗಳಿಂದ ಕೂಡಿರುವಿಕೆ, ದೋಷವಿಲ್ಲದಿರುವಿಕೆ ಇವೆರಡೂ ಸಹ ಪ್ರತ್ಯೇಕವಾಗಿ ನಾರಾಯಣನ ಸ್ವರೂಪದ ನಿರ್ಧಾರಕ್ಕೆ ಕಾರಣಗಳಾಗಿವೆ. ನಮ್ಮ ಮತದಲ್ಲಿ ಬ್ರಹ್ಮ ಹಾಗೂ ಈಶ್ವರ ಇಬ್ಬರಿಗೂ ಭೇದವಿಲ್ಲ. ಇದನ್ನು ತಿಳಿಸುವುದಕ್ಕಾಗಿ 'ಈಶ್ವರಃ' ಎಂಬ ಪದವನ್ನು ಬಳಸಿದ್ದಾರೆ.

## ಅನುವ್ಯಾಖ್ಯಾನದಲ್ಲಿ ಈಶ್ವರ

ಶ್ರೀನಿವಾಸತೀರ್ಥೀಯ –

**इदं च लक्षणं ब्रह्मणः श्रुत्यादिसिद्धमिति हिशब्दार्थः । यावद्वस्तु अशेषगुणोन्नद्धं निर्दोषं तावद् रामकृष्णादिरूपजातं वस्तु ईश्वरो नामेत्युक्ते समुदायैक्येन भेदाभेदावङ्गीकृताविति प्रतीयते । तन्निराकरोति – तत्रेति ॥**

**ಇದಂ ಚ ಲಕ್ಷಣಂ ಬ್ರಹ್ಮಣಃ ಶ್ರುತ್ಯಾದಿಸಿದ್ಧಮಿತಿ 'ಹಿ'ಶಬ್ದಾರ್ಥಃ। ಯಾವದ್ವಸ್ತು ಅಶೇಷಗುಣೋನ್ನದ್ಧಂ ನಿರ್ದೋಷಂ ತಾವತ್ ರಾಮಕೃಷ್ಣಾದಿರೂಪಜಾತಂ ವಸ್ತು ಈಶ್ವರೋ ನಾಮೇತ್ಯುಕ್ತೇ ಸಮುದಾಯೈಕ್ಯೇನ ಭೇದಾಭಾವಾ-ವಂಗೀಕೃತೌ ಇತಿ ಪ್ರತೀಯತೇ। ತನ್ನಿರಾಕರೋತಿ – ತತ್ರೇತಿ ॥**

ಈ ಲಕ್ಷಣವು ಬ್ರಹ್ಮನ ಸ್ವರೂಪವನ್ನು ಸ್ಪಷ್ಟವಾಗಿ ನಿರ್ಧಾರ ಮಾಡುತ್ತಿದ್ದೆ ಎಂಬುದು ಶ್ರುತಿಸಿದ್ಧವಾದ ವಿಚಾರವಾಗಿದೆ ಎಂಬುದನ್ನು 'ಹಿ'ಶಬ್ದದಿಂದ ತಿಳಿಸಿದ್ದಾರೆ.

ಯಾವ ವಸ್ತು ಸಕಲಗುಣಗಳಿಂದ ಪರಿಪೂರ್ಣವಾಗಿದೆಯೋ, ನಿರ್ದೋಷವಾಗಿ-ದೆಯೋ ಅಂತಹ ವಸ್ತು ರಾಮ, ಕೃಷ್ಣ ಮೊದಲಾದ ಅನೇಕ ರೂಪಗಳ ಸಮುದಾಯ-ರೂಪವಾಗಿದೆ. ಇಂತಹ ಸಮುದಾಯರೂಪವಾದ ವಸ್ತುವನ್ನು ಈಶ್ವರ ಎಂದು

ಹೇಳಿದಂತಾಯಿತು. ಹೀಗೆ ಸಮುದಾಯವನ್ನು ಭೇದಾಭೇದವನ್ನು ಅಂಗೀಕರಿಸಿ-ದಂತಾಯಿತಲ್ಲವೇ? ಎಂಬ ಪ್ರಶ್ನೆಗೆ 'ತತ್ರ' ಎಂಬ ಶ್ಲೋಕದ ನಾಲ್ಕನೆಯ ಪಾದದಿಂದ ಉತ್ತರಿಸಿದ್ದಾರೆ. ಭಗವಂತನಿಗೂ ಅವನ ರೂಪಗಳಿಗೂ ಯಾವುದೇ ಭೇದವಿಲ್ಲವೆಂದು ಅಭಿಪ್ರಾಯ.

## ಲಕ್ಷ್ಮಿಯ ಪ್ರಾರ್ಥನೆ

ಶ್ರೀನಿವಾಸತೀರ್ಥೀಯ –

**क्वचिदिति** । परस्परं परमात्मना चेत्यर्थ इति । **प्रार्थनीया इति** । तस्याः सकलवाङ्मनसदेवतात्वादिति भावः ।

**ಕ್ವಚಿದಿತಿ ॥ 'ಪರಸ್ಪರಂ ಪರಮಾತ್ಮನಾ ಚ' ಇತ್ಯರ್ಥ ಇತಿ । ಪ್ರಾರ್ಥನೀಯಾ ಇತಿ ॥ ತಸ್ಯಾः ಸಕಲವಾಙ್ಮನಸದೇವತಾತ್ವಾತ್ ಇತಿ ಭಾವಃ।**

ಕ್ವಚಿತ್ ಎಂದರೆ ಪರಸ್ಪರವಾಗಿ ಪರಮಾತ್ಮನ ರೂಪಗಳಿಗೆ ಎಂದರ್ಥ. ಪ್ರಾರ್ಥ-ನೀಯಾ ಎಂದರೆ ಲಕ್ಷ್ಮೀದೇವಿಯು ಸಕಲವಾಙ್ಮನಸ್ಸುಗಳಿಗೆ ಅಭಿಮಾನಿಯಾಗಿದ್ದರಿಂದ ಅವಳ ಪ್ರಾರ್ಥನೆಯು ಅತ್ಯವಶ್ಯ ಎಂದರ್ಥ.

**ನೆನೆಪಿಡಿ –**

**1. ಕಮಲಾಕಾಂತನ ಪ್ರೀತಿಗೆ ಮುಖ್ಯಪಾತ್ರರು ಶ್ರೀಮದಾಚಾರ್ಯರು ಮಾತ್ರ.**

**2. ಪರಮಾತ್ಮನು ಸಕಲಗುಣಪರಿಪೂರ್ಣನಾಗಿ, ದೋಷಗಂಧವಿಧುರ-ನಾಗಿದ್ದಾನೆಂದು ಹೇಳಿದಾಗ ಜೀವಬ್ರಹ್ಮೈಕ್ಯವು ಸರ್ವಥಾ ಯುಕ್ತವಾಗು-ವುದಿಲ್ಲ. ಅದಕ್ಕಾಗಿಯೇ ಈ ಎರಡು ವಿಶೇಷಣಗಳನ್ನು ಮಂಗಳಶ್ಲೋಕದಲ್ಲಿ ಹೇಳಿರುತ್ತಾರೆ.**

**3. 'ಅತೋಽಶೇಷಗುಣೋನ್ನದ್ಧಂ ನಿರ್ದೋಷತ್ವಂ ಯಾವದೇವ ಹಿ । ತಾವದೇವೇಶ್ವರೋ ನಾಮ - 'ಸಮಸ್ತಗುಣಪರಿಪೂರ್ಣನಾದ ನಿರ್ದುಷ್ಟ-**

ವಾದ ಯಾವ ವಸ್ತುವಿದೆಯೋ ಅದೇ ಈಶ್ವರ' ಈ ಮಾತನ್ನು ಎಂದೆಂದೂ ಮರೆಯಬೇಡಿ.

4. ಭಗವತ್ಪ್ರೀತಿಯಂತೆ ಲಕ್ಷ್ಮೀ ಪ್ರೀತಿಯೂ ಕೂಡ ಅತ್ಯಂತ ಆವಶ್ಯಕ.

## ಪ್ರಶ್ನೆಗಳು

1. ಶ್ರೀಮದಾಚಾರ್ಯರು ಮಾಡಿರುವ ಮಂಗಳಶ್ಲೋಕದಲ್ಲಿ ಎಷ್ಟು ವಿಶೇಷಣಗಳಿವೆ?

2. ಅಗಣ್ಯಗುಣನಿತ್ಯೈಕನಿಲಯಾಕೃತಿಃ ಹಾಗೂ ಅಶೇಷದೋಷರಹಿತಃ ಈ ಎರಡು ವಿಶೇಷಣಗಳ ವೈಶಿಷ್ಟ್ಯವೇನು?

3. ಕಮಲಾಲಯಃ ಎಂದೇಕೆ ಹೇಳಿರುವರು?

4. ಈಶ್ವರ ಎಂದರೇನು? ಈಶ್ವರನ ಲಕ್ಷಣವನ್ನು ಹೇಳುವ ಅವಶ್ಯಕತೆ ಏನಿತ್ತು?

5. ಮಂಗಳಶ್ಲೋಕದಲ್ಲಿ ಅಸ್ಮಾಕಂ ಎಂಬ ಕರ್ತೃವಾಚಕಪದ ಏಕಿಲ್ಲ?

* ಈ ಪ್ರಶ್ನೆಗಳಿಗೆ ಉತ್ತರವನ್ನು ನೀಡಲಾಗದಿದ್ದಲ್ಲಿ ಇನ್ನೊಮ್ಮೆ ಓದಿ. *

## ಜೀವಬ್ರಹ್ಮೈಕ್ಯವು ಶಾಸ್ತ್ರಾರ್ಥವಾದ್ದರಿಂದ ಗುಣಪೂರ್ಣತ್ವದ ಆಕ್ಷೇಪ

ಟೀಕಾ–

अत्राहुरद्वैतवादिनः, जीवब्रह्मणोरेकत्वं खलु सकल-वेदान्ततन्मीमांसाशास्त्रप्रतिपाद्यम् । न च तत् नारा-यणाख्यस्य परब्रह्मणः सदा अगण्यगुणाश्रयत्वे सम्भवति। अतादृग्रूपत्वात् जीवस्य । न हि परस्परविरुद्धस्वभाव-

**योरेकत्वं दृष्टम् । अतो न स्वभावतोऽगण्यगुणाधि-करणत्वं नारायणस्येति ।**

**ಅತ್ರಾಹುರದ್ವೈತವಾದಿನಃ ಜೀವಬ್ರಹ್ಮಣೋರೇಕತ್ವಂ ಖಲು ಸಕಲ-ವೇದಾಂತತನ್ಮೀಮಾಂಸಾಶಾಸ್ತ್ರಪ್ರತಿಪಾದ್ಯಮ್ । ನ ಚ ತತ್ ನಾರಾ-ಯಣಾಖ್ಯಸ್ಯ ಪರಬ್ರಹ್ಮಣಃ ಸದಾ ಅಗಣ್ಯಗುಣಾಶ್ರಯತ್ವೇ ಸಂಭವತಿ । ಅತಾದೃಗ್ರೂಪತ್ವಾತ್ ಜೀವಸ್ಯ । ನ ಹಿ ಪರಸ್ಪರವಿರುದ್ಧಸ್ವಭಾವಯೋ-ರೇಕತ್ವಂ ದೃಷ್ಟಮ್ । ಅತೋ ನ ಸ್ವಭಾವತೋಽಗಣ್ಯಗುಣಾಧಿಕರಣತ್ವಂ ನಾರಾಯಣಸ್ಯೇತಿ ॥**

**ಇಲ್ಲಿ ಅದ್ವೈತವಾದಿಗಳು ಹೀಗೆ ಅಭಿಪ್ರಾಯ ಪಡುತ್ತಾರೆ – ಎಲ್ಲಾ ವೇದಗಳು ಹಾಗೂ ಬ್ರಹ್ಮಮೀಮಾಂಸಾ ಶಾಸ್ತ್ರವು ಜೀವಬ್ರಹ್ಮರ ಐಕ್ಯವನ್ನೇ ಪ್ರತಿಪಾದನೆ ಮಾಡುತ್ತಿವೆ. ಹೀಗಿರುವಾಗ ನಾರಾಯಣ ಎಂಬ ಪರಬ್ರಹ್ಮನಿಗೆ ಅಗಣ್ಯಗುಣಾಶ್ರಯತ್ವವನ್ನು ಹೇಳಿದರೆ ಜೀವಬ್ರಹ್ಮರ ಐಕ್ಯವೇ ಕೂಡುವುದಿಲ್ಲ. ಏಕೆಂದರೆ, ನಾರಾಯಣನು ಅಗಣ್ಯಗುಣಾಶ್ರಯನಾದಂತೆ ಜೀವನು ಅಗಣ್ಯ-ಗುಣಾಶ್ರಯನಾಗಿರುವುದಿಲ್ಲ. ಪರಸ್ಪರವಿರುದ್ಧವಾದ ಸ್ವಭಾವವುಳ್ಳ ಎರಡು ಪದಾರ್ಥಗಳಿಗೆ ಐಕ್ಯವು ಕಂಡಿಲ್ಲ. ಆದ್ದರಿಂದ ಸ್ವಾಭಾವಿಕವಾಗಿ ಅಗಣ್ಯ-ಗುಣಾಶ್ರಯತ್ವವನ್ನು ಪರಮಾತ್ಮನಿಗೆ ಹೇಳಬಾರದು.**

**ಟೀಕೆಯ ಅರ್ಥ**- ಅತ್ರ= ಪರಮಾತ್ಮನು ಅಗಣ್ಯವಾದ ಗುಣಗಳಿಗೆ ಆಶ್ರಯ-ನಾಗಿದ್ದಾನೆ ಎಂಬ ವಿಷಯದಲ್ಲಿ, ಅದ್ವೈತವಾದಿನಃ= ಐಕ್ಯವಾದಿಗಳು, ಆಹುಃ= ಹೀಗೆ ಹೇಳುತ್ತಾರೆ, ಸಕಲವೇದಾಂತತನ್ಮೀಮಾಂಸಾಶಾಸ್ತ್ರಪ್ರತಿಪಾದ್ಯಮ್= ಸಕಲವೇದಗಳು ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಪ್ರತಿಪಾದ್ಯವಾದದ್ದು, ಜೀವಬ್ರಹ್ಮಣೋಃ= ಜೀವ ಹಾಗು ಬ್ರಹ್ಮರ, ಏಕತ್ವಮ್ ಖಲು= ಐಕ್ಯವಷ್ಟೇ, ತತ್= ಅಂತಹ ಐಕ್ಯತ್ವವು ನಾರಾಯಣಾಖ್ಯಸ್ಯ= ನಾರಾಯಣನೆಂಬ ಪರಬ್ರಹ್ಮಣಃ= ಪರಬ್ರಹ್ಮನು ಸದಾ= ಮೂರುಕಾಲದಲ್ಲಿಯೂ ಅಗಣ್ಯ-ಗುಣಾಶ್ರಯತ್ವೇ= ಅಗಣ್ಯವಾದ ಗುಣಗಳಿಗೆ ಆಶ್ರಯನಾದರೆ, ನಚ ಸಂಭವತಿ=

ಯುಕ್ತವಾಗುವುದಿಲ್ಲ. ಏಕೆಂದರೆ ಜೀವಸ್ಯ= ಜೀವನು, ಅತಾದೃಗ್ರೂಪತ್ವಾತ್= ನಾರಾಯಣ-ನಂತೆ ಅನಂತವಾದ ಗುಣಗಳಿಗೆ ಆಶ್ರಯನಾಗಿರುವುದಿಲ್ಲ. ಪರಸ್ಪರವಿರುದ್ಧಸ್ವಭಾವಯೋಃ= ಪರಸ್ಪರವಾಗಿ ಅತ್ಯಂತ ವಿರುದ್ಧಸ್ವಭಾವದ ಎರಡುವಸ್ತುಗಳಿಗೆ ಏಕತ್ವಂ= ಐಕ್ಯವು, ನಹಿ ದೃಷ್ಟಮ್= ಎಲ್ಲಿಯೂ ಕಂಡಿಲ್ಲವಷ್ಟೇ, ಅತಃ= ಆದ್ದರಿಂದ ನಾರಾಯಣಸ್ಯ= ನಾರಾಯಣ-ನಿಗೆ ಸ್ವಭಾವತಃ= ಸ್ವಾಭಾವಿಕವಾಗಿ ಅಗಣ್ಯಗುಣಾಧಿಕರಣತ್ವಂ= ಅಗಣಿತವಾದ ಗುಣಗಳಿಗೆ ಆಶ್ರಯವಾಗಿರುವಿಕೆಯು ನ= ಯುಕ್ತವಾಗುವುದಿಲ್ಲ.

**ವಿವರಣೆ – ಹಿಂದೆ ಉತ್ತರಪ್ರಬಂಧಪ್ರಸಂಗದ ಉಪಕ್ಷೇಪಕ್ಕಾಗಿ ಎರಡು ವಿಶೇಷಣಗಳನ್ನು ಶ್ರೀಮದಾಚಾರ್ಯರು ಮಂಗಳಶ್ಲೋಕದಲ್ಲಿ ಹೇಳಿದ್ದಾರೆಂದು ತಿಳಿಸಿದರು. ಆ ವಿಶೇಷಣಗಳಿಂದ ಹೇಗೆ ಗ್ರಂಥವು ಪ್ರಾರಂಭವಾಗುತ್ತದೆಂದು ತೋರಿಸಿದ್ದಾರೆ.**

**ನಾರಾಯಣನನ್ನು ಅದ್ವೈತಿಗಳು ಪರಬ್ರಹ್ಮನೆಂದು ಕರೆಯುತ್ತಾರೆ. ಇವನು ಅಗಣ್ಯಗುಣಾಶ್ರಯನಾಗಿರುವುದಿಲ್ಲ. ಆದ್ದರಿಂದ ಜೀವನೇ ಬ್ರಹ್ಮನಾಗಿದ್ದಾನೆಂದು ಹೇಳಬಹುದು. ಒಂದು ವೇಳೆ ಪರಬ್ರಹ್ಮನು ಈಗ ಅಗಣ್ಯಗುಣಾಶ್ರಯನಾಗಿ-ದ್ದಾನೆಂದು ನೀವು ಹೇಳಿದರೆ ಜೀವಬ್ರಹ್ಮರ ಐಕ್ಯವು ಸಿದ್ಧವಾಗುವುದಿಲ್ಲ.**

**ಜೀವಬ್ರಹ್ಮರ ಐಕ್ಯವು ಏಕೆ ಸಿದ್ಧವಾಗಬೇಕೆಂದು ಪ್ರಶ್ನಿಸಬಾರದು. ಸಕಲ-ವೇದಾಂತಗಳು ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರವು ಜೀವಬ್ರಹ್ಮರ ಐಕ್ಯದಲ್ಲೇ ತಾತ್ಪರ್ಯವನ್ನು ಹೊಂದಿರುತ್ತವೆ. ಆದ್ದರಿಂದ ಪರಬ್ರಹ್ಮನು ಅಗಣ್ಯಗುಣಗಳಿಗೆ ಆಶ್ರಯನಾಗಿದ್ದಾನೆಂದು ಸರ್ವಥಾ ಹೇಳಬಾರದು.**

**ವಿದ್ಯಾರ್ಥಿಗಳೇ ಗಮನಿಸಿ –**

**ಮಾಯಾವಾದಿಗಳು ನಾರಾಯಣನನ್ನು ಪರಬ್ರಹ್ಮ ಎಂಬ ಶಬ್ದದಿಂದ ಕರೆಯುತ್ತಾರೆ. ನಮ್ಮ ಸಿದ್ಧಾಂತದಲ್ಲಿ ಈ ಶಬ್ದದ ಪ್ರಯೋಗವು ಇರುವುದಿಲ್ಲ. ಆದ್ದರಿಂದ ಮಾಯಾವಾದಿಗಳು ನಾರಾಯಣನನ್ನು ಪರಬ್ರಹ್ಮನೆಂದು ಕರೆಯುತ್ತಾರೆಂದು ನಾವೂ ಕೂಡ ಹಾಗೆ ಕರೆಯ-ಬಾರದು.**

ಸಾರ–ಜೀವ ಹಾಗು ಬ್ರಹ್ಮರಿಗೆ ಐಕ್ಯವು ಇರುತ್ತದೆಂದು ಅನೇಕ ಪ್ರಮಾಣಗಳಿಂದ ಸಿದ್ಧವಾಗಿದೆ. ಈ ಐಕ್ಯವನ್ನು ಸಕಲಶಾಸ್ತ್ರಗಳು ಪ್ರತಿಪಾದನೆ ಮಾಡುತ್ತಿರುವುದರಿಂದ ಇದರ ಸಂರಕ್ಷಣೆ ಅತ್ಯಾವಶ್ಯಕ. ಆದರೆ ತತ್ವವಾದಿಗಳಾದ ನೀವು ಪರಬ್ರಹ್ಮನು ಅಗಣ್ಯಗುಣಗಳಿಗೆ ಆಶ್ರಯನೆನ್ನುತ್ತಿದ್ದೀರಿ. ಜೀವನು ಅಲ್ಪಗುಣವುಳ್ಳವನಾದ್ದರಿಂದ ಜೀವ ಪರಮಾತ್ಮರಿಗೆ ವಿರುದ್ಧವಾದ ಧರ್ಮಗಳನ್ನು ಹೇಳಿದಂತಾಗುತ್ತದೆ. ಯಾವ ಎರಡು ವಸ್ತುಗಳು ವಿರುದ್ಧಸ್ವಭಾವವನ್ನು ಹೊಂದಿರುತ್ತವೋ; ಆ ಎರಡು ವಸ್ತು-ಗಳಿಗೆ ಐಕ್ಯವನ್ನು ಸರ್ವಥಾ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪರಬ್ರಹ್ಮನು ಅಗಣ್ಯಗುಣಗಳಿಗೆ ಆಶ್ರಯನಾಗಿದ್ದಾನೆಂದು ಸರ್ವಥಾ ಹೇಳಬಾರದು. ಆಗ ಜೀವಬ್ರಹ್ಮರ ಐಕ್ಯಕ್ಕೆ ವಿರೋಧವು ಬರುವುದಿಲ್ಲ. ಸಕಲಶಾಸ್ತ್ರಗಳ ಅಭಿಪ್ರಾಯ-ವಾದ ಐಕ್ಯವನ್ನು ಸಂರಕ್ಷಣೆ ಮಾಡಿದಂತಾಗುತ್ತದೆ. ಹೀಗಿರುವಾಗ ಶ್ರೀಮದಾ-ಚಾರ್ಯರು ಅಗಣ್ಯಗುಣಗಳಿಗೆ ಆಶ್ರಯನಾಗಿದ್ದಾನೆಂದೇಕೆ ಹೇಳಿದರು?

## ಪ್ರಶ್ನೆಗಳು

1)ಪರಬ್ರಹ್ಮನು ಅಗಣ್ಯಗುಣಗಳಿಗೆ ಆಶ್ರಯನಾಗಿದ್ದಾನೆಂದು ಹೇಳಿದಾಗ ಅದ್ವೈತಿಗಳು ಮಾಡುತ್ತಿರುವ ಆಕ್ಷೇಪವೇನು?

2) ಅನಂತಗುಣಗಳಿಗೆ ಆಶ್ರಯನಾದ ಪರಬ್ರಹ್ಮನಿಂದ ಜೀವನಿಗೆ ಐಕ್ಯವನ್ನು ಹೇಳಲು ಏಕೆ ಬರುವುದಿಲ್ಲ?

3) ಅದ್ವೈತಿಗಳು ಸರ್ವಜ್ಞತ್ವ ಎಂಬ ಧರ್ಮವನ್ನು ಪರಬ್ರಹ್ಮನಲ್ಲಿ ಒಪ್ಪಿದಂತೆ; ಅನಂತಗುಣಾಶ್ರಯತ್ವ ಎಂಬ ಧರ್ಮವನ್ನೇಕೆ ನಾವು ಒಪ್ಪಬಾರದು?

* ಈ ಪ್ರಶ್ನೆಗಳಿಗೆ ಉತ್ತರವನ್ನು ನೀಡಲಾಗದಿದ್ದಲ್ಲಿ ಇನ್ನೊಮ್ಮೆ ಓದಿ. *

## ಅಕಾಲದಲ್ಲೇಕೆ ತಾಂಡವನರ್ತನ?

ಮಂದಾರಮಂಜರೀ–

वेदान्तादिविषयादितत्वनिर्णयाय प्रकरणं चेत् किमनेन अकाण्ड-

ताण्डवायितेन अज्ञाननिराकरणेन ? इत्याशङ्क्य तत् सङ्घटयितुं शङ्कते – **अत्राहुरित्यादिना ।।**

**ವೇದಾಂತಾದಿವಿಷಯಾದಿತತ್ವನಿರ್ಣಯಾಯ ಪ್ರಕರಣಂ ಚೇತ್ ಕಿಮನೇನ ಅಕಾಂಡತಾಂಡವಾಯಿತೇನ ಅಜ್ಞಾನನಿರಾಕರಣೇನ? ಇತ್ಯಾಶಂಕ್ಯ ತತ್ ಸಂಘ-ಟಯಿತುಂ ಶಂಕತೇ – ಅತ್ರಾಹುರಿತ್ಯಾದಿನಾ ॥**

ವೇದದಲ್ಲಿ ಪ್ರತಿಪಾದನೆ ಮಾಡಲ್ಪಟ್ಟ ತತ್ವದ ನಿರ್ಣಯಕ್ಕೋಸ್ಕರವೇ ಪ್ರಕರಣಗ್ರಂಥಗಳು ಹೊರಟಿರುತ್ತವೆ ಎಂದು ಹಿಂದೆ ಹೇಳಲಾಯಿತು. ಹೀಗಿರುವಾಗ ಅದ್ವೈತಿಗಳ ಅಜ್ಞಾನವನ್ನೇಕೆ ನಿರಾಕರಿಸಬೇಕು? ಅದ್ವೈತ-ಮತದ ಅಜ್ಞಾನದ ನಿರಾಕರಣೆಯಿಂದ ವೇದದ ತತ್ವನಿರ್ಣಯವೇನು ಸಿದ್ಧವಾಗುವುದಿಲ್ಲ. ಅಪ್ರಸ್ತುತವಾಗಿ ಅದ್ವೈತಮತವನ್ನು ನಿರಾಕರಿಸುತ್ತಿರು-ವುದರಿಂದ ಅಕಾಲದಲ್ಲಿ ತಾಂಡವನರ್ತನಮಾಡಿದಂತಾಯಿತು ಎಂದು ಆಶಂಕಿಸಿ ಅದ್ವೈತಮತದ ನಿರಾಕರಣೆಯು ಅತ್ಯಂತ ಪ್ರಸ್ತುತವೆಂದು ಸಮರ್ಥಿಸುವುದಕ್ಕಾಗಿ ಅದ್ವೈತವಾದವನ್ನು ಆಶಂಕಿಸುತ್ತಿದ್ದಾರೆ "ಅತ್ರಾಹುಃ" ಇತ್ಯಾದಿ ಗ್ರಂಥದಿಂದ.

## ನಾರಾಯಣ ಯಾರು?

**ಮಂದಾರಮಂಜರೀ–**

नारायणः किं परब्रह्म ? उत न ? न चेदपसिद्धान्तः । ब्रह्म चेत् सोऽप्यल्पगुणः स्यात् । जीवो वा अनन्तगुणः स्यात् । विरुद्धधर्माश्रययोरभेदायोगात् । अभेदस्य च प्रामाणिकत्वादिति चोद्यार्थः ।

**ನಾರಾಯಣಃ ಕಿಂ ಪರಬ್ರಹ್ಮ? ಉತ ನ? ನ ಚೇತ್ ಅಪಸಿದ್ಧಾಂತಃ । ಬ್ರಹ್ಮ ಚೇತ್ ಸೋऽಪ್ಯಲ್ಪಗುಣಃ ಸ್ಯಾತ್ । ಜೀವೋ ವಾ ಅನಂತಗುಣಃ ಸ್ಯಾತ್ । ವಿರುದ್ಧಧರ್ಮಾಶ್ರಯಯೋಃ ಅಭೇದಾಯೋಗಾತ್ । ಅಭೇದಸ್ಯ ಚ ಪ್ರಾಮಾ-ಣಿಕತ್ವಾದಿತಿ ಚೋದ್ಯಾರ್ಥಃ ।**

ನಾರಾಯಣನು ಪರಬ್ರಹ್ಮನೋ ಅಥವಾ ಅಲ್ಲವೋ? ಪರಬ್ರಹ್ಮನಲ್ಲವೆಂದರೆ ಅಪಸಿದ್ಧಾಂತ ಬರುತ್ತದೆ. ಪರಬ್ರಹ್ಮನೆನ್ನುವುದಾದರೆ ಅಂತಹ ನಾರಾಯಣನು ಅಲ್ಪಗುಣವುಳ್ಳವನೇ ಆಗಬೇಕು. ಇಲ್ಲವಾದಲ್ಲಿ ಜೀವನನ್ನು ಅನಂತಗುಣನೆಂದು ಹೇಳಬೇಕು. ಒಂದುವೇಳೆ ನಾರಾಯಣನು ಅನಂತಗುಣಪರಿಪೂರ್ಣನು ಜೀವನು ಅಲ್ಪಗುಣವುಳ್ಳವನು ಎಂದು ಹೇಳಿದರೆ ವಿರುದ್ಧವಾದ ಧರ್ಮಗಳಿಗೆ ಇಬ್ಬರೂ ಕೂಡ ಆಶ್ರಯರಾಗಿದ್ದಾರೆ ಎಂದಂತಾಗುತ್ತದೆ. ಇಂತಹ ವಿರುದ್ಧಧರ್ಮಗಳಿಗೆ ಆಶ್ರಯವಾದ ಜೀವಬ್ರಹ್ಮರಿಗೆ ಅಭೇದವನ್ನು ಹೇಳುವುದು ಕೂಡ ಕಷ್ಟವಾಗುತ್ತದೆ. ಆದರೆ ಅನೇಕ ಪ್ರಮಾಣಗಳಿಂದ ಅಭೇದವು ಈಗಾಗಲೇ ಸಿದ್ಧವಾಗಿದೆ.

## ಅನಂತಗುಣಪೂರ್ಣನು ನಾರಾಯಣ

ಮಂದಾರಮಂಜರೀ–

ननु त्वन्मते जीवब्रह्मणोः स्वाभाविकाभेदेऽपि सर्वज्ञत्वाल्पज्ञत्वादिवत् ममापि अनन्तगुणवत्त्वतदभावव्यवस्था किं न स्यात् ? इत्यत आह – **स्वभावत इति** ।। मम तु सार्वज्ञ्यादिकमौपाधिकमित्यर्थः ।

ನನು ತ್ವನ್ಮತೇ ಜೀವಬ್ರಹ್ಮಣೋಃ ಸ್ವಾಭಾವಿಕಾಭೇದೇಽಪಿ ಸರ್ವಜ್ಞತ್ವಾಲ್ಪಜ್ಞತ್ವಾದಿವತ್ ಮಮಾಪಿ ಅನಂತಗುಣವತ್ತ್ವತದಭಾವವ್ಯವಸ್ಥಾ ಕಿಂ ನ ಸ್ಯಾತ್? ಇತ್ಯತ ಆಹ – ಸ್ವಭಾವತ ಇತಿ ।। ಮಮ ತು ಸಾರ್ವಜ್ಞ್ಯಾದಿಕಮ್ ಔಪಾಧಿಕಮ್ ಇತ್ಯರ್ಥಃ।

ಪ್ರಶ್ನೆ- ಅದ್ವೈತಮತದಲ್ಲಿ ಜೀವಬ್ರಹ್ಮರಿಗೆ ಸ್ವಾಭಾವಿಕವಾದ ಐಕ್ಯವನ್ನು ಒಪ್ಪಿದ್ದಾರೆ ಆದರೂ ಬ್ರಹ್ಮನನ್ನು ಸರ್ವಜ್ಞನೆಂದು ಜೀವನನ್ನು ಅಲ್ಪಜ್ಞನೆಂದೂ ಕೂಡ ಹೇಳುತ್ತಾರೆ. ಅದರಂತೆ ನಾವೂ ಕೂಡ ಪರಮಾತ್ಮನು ಅನಂತಗುಣವುಳ್ಳವನು ಜೀವನು ಅಲ್ಪಗುಣವುಳ್ಳವನೆಂದು ವ್ಯವಸ್ಥೆ ಮಾಡುತ್ತೇವೆ. ಏನು ತಪ್ಪು?

ಉತ್ತರ – ಸ್ವಭಾವತಃ ಎಂದು. ಅಭಿಪ್ರಾಯ ಹೀಗಿದೆ– ಅದ್ವೈತಿಗಳು ಒಪ್ಪುವ ಸಾರ್ವಜ್ಞ್ಯಾದಿಗಳು ಕೇವಲ ಔಪಾಧಿಕವಾಗಿ ಮಾತ್ರ ಹೊರತು ಸ್ವಾಭಾವಿಕವಾಗಿ ಅಲ್ಲ. ಆದರೆ ಪ್ರಕೃತ ಅನಂತಗುಣಪರಿಪೂರ್ಣತ್ವವು ಸ್ವಾಭಾವಿಕವಾಗಿ ಇದೆಯೆಂಬುದು ತತ್ವವಾದಿಗಳ ಮತ ಎಂದು.

## ವಿರುದ್ಧಧರ್ಮಾಧಿಕರಣಗಳಿಗೆ ಐಕ್ಯವಿಲ್ಲ.

उत्तरप्रबन्धप्रसङ्गोपक्षेपायेत्युक्तम् । तद्दर्शयति – **अत्राहुरिति** । तत् एकत्वम् ।। **अतादृग्रूपत्वादिति** । नारायणवदनन्तगुणाश्रयत्वाभावादिति भावः । अस्तु वा जीवस्यातादृग्रूपत्वम् । तथाप्यैक्यमेव किं न स्यादित्यत आह – **नहीति** । जलानलवदिति भावः । **स्वभावतः** = परमार्थतः ।

'ಉತ್ತರಪ್ರಬಂಧಪ್ರಸಂಗೋಪಕ್ಷೇಪಾಯ' ಇತ್ಯುಕ್ತಮ್ । ತದ್ದರ್ಶಯತಿ – ಅತ್ರಾಹುರಿತಿ ॥ ತತ್ = ಏಕತ್ವಮ್ । ಅತಾದೃಗ್ ರೂಪತ್ವಾದಿತಿ ॥ ನಾರಾಯಣವತ್ ಅನಂತಗುಣಾಶ್ರಯತ್ವಾಭಾವಾತ್ ಇತಿ ಭಾವಃ । ಅಸ್ತು ವಾ ಜೀವಸ್ಯ ಅತಾದೃಗ್‌ರೂಪತ್ವಮ್ । ತಥಾಪಿ ಐಕ್ಯಮೇವ ಕಿಂ ನ ಸ್ಯಾತ್? ಇತ್ಯತ ಆಹ – ನ ಹೀತಿ ॥ ಜಲಾನಲವತ್ ಇತಿ ಭಾವಃ । ಸ್ವಭಾವತಃ = ಪರಮಾರ್ಥತಃ।

ಈ ಹಿಂದಿನ ಮೂಲದಲ್ಲಿ ''ಉತ್ತರಪ್ರಬಂಧಪ್ರಸಂಗೋಪಕ್ಷೇಪಾಯ ಕೃತಂ'' ಮಂಗಳ ಶ್ಲೋಕದಲ್ಲಿರುವ ಮೊದಲನೆಯ ಎರಡು ವಿಶೇಷಣಗಳನ್ನು ಮುಂದಿನ ಪ್ರಬಂಧದ ಪ್ರಾರಂಭಕ್ಕಾಗಿ ನಿವೇಶಿಸಲಾಗಿದೆ ಎಂದು ಹೇಳಿದರು. ಅಂತಹ ಉತ್ತರ-ಪ್ರಬಂಧವನ್ನು ಈಗ ಬರೆಯಲು ಪ್ರಾರಂಭಿಸಿದ್ದಾರೆ. ''ಅತ್ರಾಹುಃ'' ಇತ್ಯಾದಿಯಾಗಿ. ತತ್ ಎಂಬ ಪದಕ್ಕೆ ಐಕ್ಯ ಎಂದರ್ಥ. ಅತಾದೃಗ್‌ರೂಪತ್ವಾತ್ ಎಂದರೆ ನಾರಾಯಣನಂತೆ ಜೀವನು ಅನಂತಗುಣಗಳಿಗೆ ಆಧಾರನಾಗಿಲ್ಲ ಎಂದರ್ಥ. ಜೀವನು ನಾರಾಯಣನಂತೆ

ಅಗಣ್ಯಗುಣಗಳಿಗೆ ಆಶ್ರಯನಾಗದಿದ್ದರೂ ಕೂಡ ನಾರಾಯಣನ ಜೊತೆಗೆ ಐಕ್ಯವನ್ನೇಕೆ ಹೇಳಬಾರದು? ಎಂಬ ಪ್ರಶ್ನೆಗೆ ''ನಹಿ'' ಎಂಬ ವಾಕ್ಯವು ಹೊರಟಿದೆ. ಬೆಂಕಿ ಹಾಗೂ ನೀರುಗಳಲ್ಲಿ ವಿರುದ್ಧ ಸ್ವಭಾವವಿರುವುದರಿಂದ ಭೇದವೇ ಇರುತ್ತದೆ. ಅದರಂತೆ ಜೀವ-ಬ್ರಹ್ಮರಿಗೂ ಭೇದವನ್ನೇ ಹೇಳಬೇಕು. ಸ್ವಭಾವತಃ ಎಂಬ ಪದಕ್ಕೆ ಪಾರಮಾರ್ಥಿಕವಾಗಿ ಎಂದರ್ಥ.

## ವಿಶೇಷವಿಚಾರ

**ಪ್ರಶ್ನೆ – ಭಗವಂತನು ಅಗಣ್ಯಗುಣಾಶ್ರಯವುಳ್ಳವನಾಗಲಿ; ಜೀವನು ಅಲ್ಪಗುಣ-ವುಳ್ಳವನೇ ಆಗಲಿ. ಆದರೂ ಐಕ್ಯವನ್ನೇಕೆ ಹೇಳಬಾರದು?**

**ಉತ್ತರ – ಪರಸ್ಪರ ವಿರುದ್ಧಸ್ವಭಾವವುಳ್ಳ ಎರಡು ವಸ್ತುಗಳಲ್ಲಿ ಐಕ್ಯವು ಕಂಡಿಲ್ಲ. ಇದಕ್ಕೇನು ಉದಾಹರಣೆ. ಬೆಂಕಿಯಲ್ಲಿ ಉಷ್ಣಸ್ಪರ್ಶವಿದೆ, ನೀರಿನಲ್ಲಿ ಶೀತಸ್ಪರ್ಶವಿದೆ. ವಿರುದ್ಧಸ್ವಭಾವವುಳ್ಳ ಬೆಂಕಿಹಾಗೂ ನೀರುಗಳಿಗೆ ಭೇದವೇ ಇರುವುದು ಕಂಡಿದೆ ಹೊರತು ಅಭೇದವು ಕಂಡಿಲ್ಲ. ಅದರಂತೆ ವಿರುದ್ಧಸ್ವಭಾವವುಳ್ಳ ಜೀವಬ್ರಹ್ಮರಿಗೂ ಭೇದವನ್ನೇ ಹೇಳಬೇಕು.**

## ಅಜ್ಞಾನವು ಅನುಪಪನ್ನವಾದ್ದರಿಂದ ಐಕ್ಯವು ಶಾಸ್ತ್ರಾರ್ಥವಾಗದು

**ಟೀಕಾ–**

**तदयुक्तम्, स्यादिदं यदि जीवब्रह्मणोरेकत्वं शास्त्रार्थः स्यात् । न चैवं सम्भवति । तथात्वे शास्त्रस्य अना-रम्भणीयत्व प्रसङ्गात् । यत् खलु अधिकारिविषय-प्रयोजनसम्बन्धवत् तत् आरम्भणीयं दृष्टम् । न च एतत् अद्वैतवादे सम्भवति अधिकार्यादिसिद्धेरज्ञान-सिद्ध्यधीनत्वात् । न च तत्पक्षे अज्ञानमुपपद्यते । कथम् ? इति तत्राह –**

**ತದಯುಕ್ತಮ್, ಸ್ಯಾದಿದಂ ಯದಿ ಜೀವಬ್ರಹ್ಮಣೋರೇಕತ್ವಂ ಶಾಸ್ತ್ರಾರ್ಥಃ ಸ್ಯಾತ್ । ನ ಚೈವಂ ಸಂಭವತಿ । ತಥಾತ್ವೇ ಶಾಸ್ತ್ರಸ್ಯ ಅನಾರಂಭಣೀಯತ್ವಪ್ರಸಂಗಾತ್ । ಯತ್ ಖಲು ಅಧಿಕಾರಿವಿಷಯಪ್ರಯೋಜನಸಂಬಂಧವತ್ ತತ್ ಆರಂಭಣೀಯಂ ದೃಷ್ಟಮ್ । ನ ಚ ಏತತ್ ಅದ್ವೈತವಾದೇ ಸಂಭವತಿ ಅಧಿಕಾರ್ಯಾದಿಸಿದ್ಧೇರಜ್ಞಾನಸಿದ್ಧ್ಯಧೀನತ್ವಾತ್ । ನ ಚ ತತ್ಪಕ್ಷೇ ಅಜ್ಞಾನಮುಪಪದ್ಯತೇ । ಕಥಮ್? ಇತಿ, ತತ್ರಾಹ –**

**ಮಾಯಾವಾದಿಗಳ ಆಕ್ಷೇಪವು ಅಯುಕ್ತ. ಒಂದು ವೇಳೆ ಜೀವಬ್ರಹ್ಮರ ಐಕ್ಯವು ಶಾಸ್ತ್ರಗಳಿಂದ ಪ್ರತಿಪಾದ್ಯವಾಗಿದ್ದಲ್ಲಿ ಹಾಗೆ ಆಶಂಕಿಸಬಹುದಿತ್ತು. ಆದರೆ ಜೀವಬ್ರಹ್ಮರ ಐಕ್ಯವು ಶಾಸ್ತ್ರಪ್ರತಿಪಾದ್ಯವಾಗಲು ಸಾಧ್ಯವಿಲ್ಲ.**

**ಒಂದು ವೇಳೆ ಐಕ್ಯವನ್ನು ಶಾಸ್ತ್ರವು ಪ್ರತಿಪಾದನೆ ಮಾಡುವುದಾದರೆ ಆಗ ಶಾಸ್ತ್ರವು ಅನಾರಂಭಣೀಯವಾಗುತ್ತದೆ. ಏಕೆಂದರೆ ಅಧಿಕಾರಿ, ವಿಷಯ, ಪ್ರಯೋಜನ ಸಂಬಂಧಗಳಿದ್ದರೆ ಮಾತ್ರ ಅಂತಹ ಶಾಸ್ತ್ರವು ಪ್ರಾರಂಭ ಮಾಡುವುದಕ್ಕೆ ಯೋಗ್ಯವಾಗುತ್ತದೆ. ಅದ್ವೈತವಾದದಲ್ಲಿ ಈ ಅಧಿಕಾರಿವಿಷಯಪ್ರಯೋಜನಸಂಬಂಧಗಳೇ ಕೂಡುವುದಿಲ್ಲ. ಏಕೆಂದರೆ, ಮಾಯಾವಾದಿಗಳ ಪ್ರಕಾರ ಅಜ್ಞಾನದ ಅಧೀನವಾಗಿ ಇವುಗಳು ಕೂಡಬೇಕು. ಆದರೆ ಅವರ ಮತದಲ್ಲಿ ಅಜ್ಞಾನವೇ ಅಯುಕ್ತವಾಗುತ್ತದೆ. ಹೇಗೆ? ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರು ಉತ್ತರಿಸುತ್ತಿದ್ದಾರೆ.**

ಟೀಕೆಯ ಅರ್ಥ – ತತ್= ಅದ್ವೈತಿಗಳ ವಾದವು, ಅಯುಕ್ತಮ್= ಯುಕ್ತವಲ್ಲ, ಯದಿ=ಒಂದುವೇಳೆ, ಜೀವಬ್ರಹ್ಮಣೋಃ= ಜೀವ ಹಾಗೂ ಬ್ರಹ್ಮರಿಗೆ ಏಕತ್ವಮ್= ಐಕ್ಯವು ಇರುತ್ತದೆಂಬುದು, ಶಾಸ್ತ್ರಾರ್ಥಃ= ಸಕಲಶಾಸ್ತ್ರಗಳ ಅರ್ಥವು ಸ್ಯಾತ್= ಇದ್ದಲ್ಲಿ, ಇದಂ= ಅದ್ವೈತಿಗಳ ವಾದವು, ಸ್ಯಾತ್= ಯುಕ್ತವಾಗುತ್ತಿತ್ತು , ಏವಂ= ಜೀವಬ್ರಹ್ಮರ ಐಕ್ಯಕ್ಕೆ ಸಕಲ ಶಾಸ್ತ್ರಪ್ರತಿಪಾದಕತ್ವವು, ನ ಚ ಸಂಭವತಿ= ಸರ್ವಥಾ ಯುಕ್ತವಾಗುವುದಿಲ್ಲ. ತಥಾತ್ವೇ=

ಐಕ್ಯವೇ ಸಕಲಶಾಸ್ತ್ರಾರ್ಥವಾದಲ್ಲಿ, ಶಾಸ್ತ್ರಸ್ಯ= ಶಾಸ್ತ್ರಕ್ಕೆ, ಅನಾರಂಭಣೀಯತ್ವಪ್ರಸಂಗಾತ್= ಅನಾರಂಭಣೀಯತ್ವವು ಬರಬೇಕಾದೀತು, ಯತ್ ಖಲು= ಯಾವ ಗ್ರಂಥವಾದರೂ, ಅಧಿಕಾರಿವಿಷಯಪ್ರಯೋಜನಸಂಬಂಧವತ್= ಅಧಿಕಾರಿ ವಿಷಯ, ಪ್ರಯೋಜನ, ಸಂಬಂಧ ಇವುಗಳಿಂದ ಯುಕ್ತವಾಗಿರುತ್ತದೋ, ತತ್= ಅಂಥ ಗ್ರಂಥವೇ, ಆರಂಭಣೀಯಂ= ಆರಂಭಣೀಯವೆಂಬುದು ದೃಷ್ಟಮ್= ಕಂಡಿರುತ್ತದೆ. ಏತತ್= ಅಧಿಕಾರಿ ಪ್ರಯೋಜನ ವಿಷಯ ಸಂಬಂಧಗಳ ಇರುವಿಕೆಯು, ಅದ್ವೈತವಾದೇ= ಅದ್ವೈತಮತದಲ್ಲಿ, ನಚ ಸಂಭವತಿ= ಕೂಡುವುದಿಲ್ಲ, ಏಕೆಂದರೆ, ಅಧಿಕಾರಿಯಾದಿಸಿದ್ಧೇಃ= ಅಧಿಕಾರಿ ವಿಷಯ ಪ್ರಯೋಜನ ಸಂಬಂಧಗಳ ಸಿದ್ಧವಾಗುವಿಕೆಯು, ಅಜ್ಞಾನಸಿದ್ಧತ್ವಾತ್= ಅಜ್ಞಾನದ ಸಿದ್ಧಿಯ ಅಧೀನವಾಗಿದೆ. ತತ್ಪಕ್ಷೇ=ಅದ್ವೈತಮತದಲ್ಲಿ ಅಜ್ಞಾನಂ= ಅಜ್ಞಾನವೇ, ನಚ ಉಪಪದ್ಯತೇ= ಯುಕ್ತವಾಗುವುದಿಲ್ಲ. ಕಥಮ್= ಹೇಗೆ, ಇತಿ = ಈ ಪ್ರಶ್ನೆಗೆ, ತತ್ರಾಹ= ಶ್ರೀಮದಾ-ಚಾರ್ಯರೇ ಉತ್ತರಿಸುತ್ತಿದ್ದಾರೆ-

**मूलम् – अज्ञताऽखिलसंवेत्तुर्घटते न कुतश्चन ।**

**ಮೂಲ - ಅಜ್ಞತಾऽಖಿಲಸಂವೇತ್ತುಃ ಘಟತೇ ನ ಕುತಶ್ಚನ ॥**

**ಎಲ್ಲವನ್ನೂ ತಿಳಿದಿರುವ ಪರಮಾತ್ಮನಿಗೆ ಯಾವುದೇ ವಿಷಯದಲ್ಲಿಯೂ ಅಜ್ಞಾನವು ಸರ್ವಥಾ ಕೂಡುವುದಿಲ್ಲ.**

**ಅರ್ಥ** – ಅಖಿಲಸಂವೇತ್ತುಃ = ಎಲ್ಲವನ್ನು ತಿಳಿಯುವವನಿಗೆ, ಅಜ್ಞತಾ= ಅಜ್ಞಾನವು, ಕುತಶ್ಚನ= ಯಾವ ವಿಷಯದಲ್ಲೂ, ನಘಟತೇ= ಯುಕ್ತವಾಗುವುದಿಲ್ಲ.

### ವ್ಯಾಪಕತ್ವಾತ್ ವ್ಯಾಪ್ಯಾಭಾವಃ

**ಟೀಕಾ–**

**अज्ञानं हि कस्यचित् कचित् सम्भवति । न च तत्पक्षे परमात्मातिरिक्तं वस्तु विद्यत इति तस्यैवाज्ञानं वक्तव्यम् । न च तस्य कुतश्चन कुत्रापि तत् सम्भवति**

सर्वज्ञत्वात् । अतो व्यापकीभूताश्रयविषयानुपपत्त्या व्याप्यस्याज्ञानस्याप्यनुपपत्तिः।

ಅಜ್ಞಾನಂ ಹಿ ಕಸ್ಯಚಿತ್ ಕ್ವಚಿತ್ ಸಂಭವತಿ । ನ ಚ ತತ್ಪಕ್ಷೇ ಪರಮಾತ್ಮಾತಿರಿಕ್ತಂ ವಸ್ತು ವಿದ್ಯತ ಇತಿ ತಸ್ಯೈವಾಜ್ಞಾನಂ ವಕ್ತವ್ಯಮ್ । ನ ಚ ತಸ್ಯ ಕುತಶ್ಚನ ಕುತ್ರಾಪಿ ತತ್ ಸಂಭವತಿ ಸರ್ವಜ್ಞತ್ವಾತ್ । ಅತೋ ವ್ಯಾಪಕೀಭೂತಾಶ್ರಯವಿಷಯಾನುಪಪತ್ತ್ಯಾ ವ್ಯಾಪ್ಯಸ್ಯಾಜ್ಞಾನಸ್ಯಾಪ್ಯನುಪಪತ್ತಿಃ।

ಅಜ್ಞಾನವು ಪುರುಷನೊಬ್ಬನಿಗೆ ಯಾವುದಾದರೂ ವಿಷಯದಲ್ಲಿ ಕೂಡುತ್ತದೆ. ಆದರೆ ನಿಮ್ಮ ಪಕ್ಷದಲ್ಲಿ ಪರಮಾತ್ಮನಿಗಿಂತ ಅತಿರಿಕ್ತವಾದ ವಸ್ತುವೇ ಇರುವುದಿಲ್ಲ. ಆದ್ದರಿಂದ ಪರಮಾತ್ಮನಿಗೆ ಅಜ್ಞಾನವನ್ನು ಹೇಳಬೇಕು. ಆಗಲಿ ಎಂದು ಹೇಳಲಾಗದು. ಪರಮಾತ್ಮನು ಸರ್ವಜ್ಞನಾಗಿರುವುದರಿಂದ, ಯಾವ ವಿಷಯದಲ್ಲಿಯೂ ಯಾವಾಗಲೂ ಅಜ್ಞಾನವು ಅವನಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ವ್ಯಾಪಕವಾದ ಆಶ್ರಯ ವಿಷಯಗಳು ಇಲ್ಲದಿರುವುದರಿಂದ ವ್ಯಾಪ್ಯವಾದ ಅಜ್ಞಾನವು ಕೂಡ ಯುಕ್ತವಾಗುವುದಿಲ್ಲ.

**ಟೀಕೆಯ ಅರ್ಥ** – ಅಜ್ಞಾನಂ ಹಿ= ಅಜ್ಞಾನವಾದರೂ, ಕಸ್ಯಚಿತ್= ಪುರುಷನೊಬ್ಬನಿಗೆ ಕ್ವಚಿತ್= ಯಾವುದಾದರೊಂದು ವಿಷಯದಲ್ಲಿ, ಸಂಭವತಿ= ಇರುತ್ತದೆ. ತತ್ಪಕ್ಷೇ= ಅದ್ವೈತಮತದಲ್ಲಾದರೂ ಪರಮಾತ್ಮಾತಿರಿಕ್ತಮ್= ಪರಮಾತ್ಮನಿಗಿಂತ ಅತಿರಿಕ್ತವಾದ, ವಸ್ತು= ಯಾವುದೇ ವಸ್ತುವು, ನಚ ವಿದ್ಯತೇ= ಇರುವುದೇ ಇಲ್ಲ, ಇತಿ= ಈ ಕಾರಣದಿಂದ ತಸ್ಯೈವ= ಅಂತಹ ಪರಮಾತ್ಮನಲ್ಲಿಯೇ ಅಜ್ಞಾನಮ್= ಅಜ್ಞಾನವನ್ನು ವಕ್ತವ್ಯಮ್= ಹೇಳಬೇಕು. ತಸ್ಯ= ಪರಮಾತ್ಮನು, ಸರ್ವಜ್ಞತ್ವಾತ್= ಸರ್ವಜ್ಞನಾದ್ದರಿಂದ, ಕುತಶ್ಚನ= ಕುತ್ರಾಪಿ= ಯಾವಾಗಲೂ ಯಾವುದೇ ವಿಷಯದಲ್ಲಿಯೂ, ತತ್= ಅಜ್ಞಾನವು, ನಚ ಸಂಭವತಿ= ಕೂಡುವುದಿಲ್ಲ, ಅತಃ= ಆದ್ದರಿಂದ, ವ್ಯಾಪಕೀಭೂತಾಶ್ರಯವಿಷಯಾನುಪಪತ್ತ್ಯಾ = ವ್ಯಾಪಕವಾದ ಆಶ್ರಯ ಹಾಗು

ವಿಷಯಗಳು ಅನುಪಪನ್ನವಾದ ಕಾರಣ, ವ್ಯಾಪ್ಯಸ್ಯ= ವ್ಯಾಪ್ಯವಾಗಿರುವ ಅಜ್ಞಾನವು, ಅನುಪಪತ್ತಿಃ= ಅನುಪಪನ್ನವಾಗುತ್ತದೆ.

## ವಿಶೇಷವಿಚಾರ–
## ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವು ಕೂಡುವುದಿಲ್ಲ.

ಪ್ರಶ್ನೆ – ಹಾಗಾದರೆ ಅಜ್ಞಾನವು ಬ್ರಹ್ಮನಲ್ಲೂ ಇರುವುದು ಬೇಡ. ಜೀವನಲ್ಲೂ ಇರುವುದು ಬೇಡ. ಅದಕ್ಕೆ ಯಾವುದೇ ವಿಷಯವು ಕೂಡ ಬೇಡ. ಹೀಗೇಕೆ ಹೇಳಬಾರದು?

ಉತ್ತರ – ಅಜ್ಞಾನಕ್ಕೆ ಸಾಶ್ರಯತ್ವ ಸವಿಷಯಕತ್ವಗಳ ನಿಯಮವಿದೆ. ಇಂತಹವನಿಗೆ ಇಂಥ ಅಜ್ಞಾನವಿದೆಯೆಂದೂ, ಇಂಥವಿಷಯದಲ್ಲಿ ಅಜ್ಞಾನವಿದೆಯೆಂದು ಹೇಳಲೇ ಬೇಕು. ಆಶ್ರಯವಿಲ್ಲದೆ ಅಜ್ಞಾನವಿರುವುದಿಲ್ಲ. ವಿಷಯವಿಲ್ಲದೆಯೂ ಅಜ್ಞಾನವಿ-ರುವುದಿಲ್ಲ.

ಪ್ರಶ್ನೆ – ಜೀವನೇ ಅಜ್ಞಾನಕ್ಕೆ ಆಶ್ರಯನಾಗಿದ್ದಾನೆಂದು ಸುಲಭವಾಗಿ ಹೇಳ-ಬಹುದು. ಏನು ತಪ್ಪು.

ಉತ್ತರ – ಅದ್ವೈತಮತದಲ್ಲಿ ಬ್ರಹ್ಮನಿಗಿಂತ ಬೇರೆಯಾದ ಜೀವನೇ ಇರುವುದಿಲ್ಲ. ಆದ್ದರಿಂದ ಬ್ರಹ್ಮನಿಗೇ ಅಜ್ಞಾನವನ್ನು ಹೇಳಬೇಕು.

ಪ್ರಶ್ನೆ – ಅಜ್ಞಾನವನ್ನು ಪರಬ್ರಹ್ಮನಲ್ಲೇ ಹೇಳೋಣ. ಏನು ತಪ್ಪು?

ಉತ್ತರ– ಬ್ರಹ್ಮನು ಸರ್ವಜ್ಞನಾಗಿದ್ದಾನೆ. ಎಲ್ಲಿ ಸಾರ್ವಜ್ಞ್ಯವಿದೆಯೋ ಅಲ್ಲಿ ಅಜ್ಞಾನ -ವಿರುವುದು ಸಾಧ್ಯವಿಲ್ಲ. ಪೂರ್ಣಬೆಳಕು ಇದ್ದಲ್ಲಿ ಕತ್ತಲೆಯ ಗಂಧವೂ ಇರಲು ಸಾಧ್ಯವಿಲ್ಲ. ಈಶ್ವರಜ್ಞಾನವು ಸರ್ವವಿಷಯಕವಾಗಿರುವದರಿಂದ ಯಾವುದೇ ವಿಷಯದಲ್ಲೂ ಅಜ್ಞಾನವನ್ನು ಹೇಳಲಾಗದು.

ಹೀಗೆ ಆಶ್ರಯವಿಷಯಗಳೆಂಬ ವ್ಯಾಪಕಧರ್ಮವಿಲ್ಲದಿರುವುದರಿಂದ ವ್ಯಾಪ್ಯವಾದ ಅಜ್ಞಾನವು ಕೂಡ ಯುಕ್ತವಾಗುವುದಿಲ್ಲ. ಹೀಗೆ ಅಜ್ಞಾನವೇ ಅದ್ವೈತಮತದಲ್ಲಿ ಕೂಡಿಸಲು ಬಾರದಿರುವುದರಿಂದ ಅನುಬಂಧಚತುಷ್ಟಯವು ಅದ್ವೈತಸಿದ್ಧಾಂತ-ದಲ್ಲಿ ಕೂಡುವುದಿಲ್ಲ.

## ಅಜ್ಞಾನವೇ ಕೂಡದಿರುವಾಗ ಐಕ್ಯವು ಶಾಸ್ತ್ರಾರ್ಥವಾಗಲು ಹೇಗೆ ಸಾಧ್ಯ ?

### ಸಾರಾಂಶ

ಜೀವಬ್ರಹ್ಮರ ಐಕ್ಯವು ಪ್ರಮಾಣಸಿದ್ಧವಾದ್ದರಿಂದ ಪರಮಾತ್ಮನು ಅಗಣ್ಯಗುಣಗಳಿಗೆ ಆಶ್ರಯನೇ ಆಗುವುದಿಲ್ಲ. ಏಕೆಂದರೆ ಎಂಬುದಾಗಿ ಅದ್ವೈತಿಗಳು ಆಕ್ಷೇಪ ಮಾಡಿ-ದರು. ಒಂದುವೇಳೆ ಜೀವಬ್ರಹ್ಮರ ಐಕ್ಯವು ಪ್ರಮಾಣಸಿದ್ಧವಾಗಿದ್ದಲ್ಲಿ ಅವರಿಬ್ಬರ ಐಕ್ಯಸಂರಕ್ಷಣೆಗೋಸ್ಕರ ಅಗಣ್ಯಗುಣಗಳಿಗೆ ಆಶ್ರಯತ್ವವನ್ನು ಹೇಳುವುದು ತಪ್ಪಾಗುತ್ತಿತ್ತು. ಆದರೆ ಜೀವಬ್ರಹ್ಮರ ಐಕ್ಯವನ್ನು ಶಾಸ್ತ್ರದ ಯಾವುದೇ ಭಾಗದ-ಲ್ಲಿಯೂ ಕೂಡ ಸಮರ್ಥನೆ ಮಾಡಿಲ್ಲ. ಅದ್ವೈತಿಗಳು ಹೇಳುವ ಐಕ್ಯವು ಯಾವುದೇ ಪ್ರಮಾಣದಿಂದ ಸಿದ್ಧವಾಗುವುದಿಲ್ಲ. ಒಂದು ವೇಳೆ ಜೀವಬ್ರಹ್ಮರ ಐಕ್ಯವನ್ನೇ ಶಾಸ್ತ್ರಗಳು ಪ್ರತಿಪಾದನೆ ಮಾಡುವುದಾದಲ್ಲಿ ಅಂತಹ ಶಾಸ್ತ್ರವನ್ನು ರಚನೆ ಮಾಡುವುದೇ ತಪ್ಪಾಗುತ್ತದೆ.

ಯಾವುದೇ ಶಾಸ್ತ್ರವನ್ನು ರಚನೆ ಮಾಡಬೇಕಾದರೆ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧಗಳು ಇರಲೇಬೇಕು. ಈ ಅಧಿಕಾರಿ ಮೊದಲಾದವುಗಳನ್ನು ಗಮನಿಸಿಯೇ ಜಿಜ್ಞಾಸುವಾದವನು ಗ್ರಂಥದ ಅಧ್ಯಯನದಲ್ಲಿ ತೊಡಗುತ್ತಾನೆ. ಐಕ್ಯವೇ ಸಕಲಶಾಸ್ತ್ರಗಳ ಅರ್ಥವೆಂದು ಹೇಳುವುದಾರೆ ಇದು ಕೂಡುವುದಿಲ್ಲ. ಏಕೆಂದರೆ ಈ ಅಧಿಕಾರಿ ವಿಷಯ ಪ್ರಯೋಜನ ಸಂಬಂಧಗಳೆಲ್ಲವೂ ಅದ್ವೈತ-ಮತದ ಪ್ರಕಾರ ಅಜ್ಞಾನಗರ್ಭಿತವಾಗಿವೆ. ಅಜ್ಞಾನವನ್ನು ಉಪಪಾದನೆ ಮಾಡಲು ಅದ್ವೈತಿಗಳಿಗೆ ಸಾಧ್ಯವೇ ಇಲ್ಲ. ಏಕೆಂದರೆ "ಅಜ್ಞತಾಖಿಲಸಂವೇತ್ತುಃ ಘಟತೇ ನ ಕುತಶ್ಚನ" ಸರ್ವಜ್ಞನಾದ ಪರಮಾತ್ಮನಲ್ಲಿ ಯಾವುದೇ ಕಾಲದಲ್ಲಿಯೂ, ಯಾವುದೇ ವಿಷಯದಲ್ಲಿ ಅಜ್ಞಾನವಿರಲು ಸಾಧ್ಯವಿಲ್ಲ.

### ಪ್ರಶ್ನೆಗಳು

1) ಅದ್ವೈತಮತದ ಪ್ರಕಾರ ಸಕಲಶಾಸ್ತ್ರಗಳ ತಾತ್ಪರ್ಯವೆಲ್ಲಿ?

2) ಯಾವ ಗ್ರಂಥವು ಆರಂಭಣೀಯವಾಗುತ್ತದೆ?

3) ಅನುಬಂಧಚತುಷ್ಟಯ ಎಂದರೆ ಏನು?

4) ಅದ್ವೈತಮತದಲ್ಲಿ ಅಜ್ಞಾನವೇ ಕೂಡುವುದಿಲ್ಲವೆನ್ನಲು ಶ್ರೀಮದಾಚಾರ್ಯರು ಹೇಳುವ ಪ್ರಧಾನ ಯುಕ್ತಿ ಯಾವುದು?

5) ವ್ಯಾಪ್ಯವ್ಯಾಪಕಭಾವ ಎಂದರೆ ಏನು?

6) ಎಂತಹ ಧರ್ಮಗಳಿಗೆ ಪರಸ್ಪರ ವಿರೋಧ ಬರುತ್ತದೆ?

* ಈ ಪ್ರಶ್ನೆಗಳಿಗೆ ಉತ್ತರವನ್ನು ನೀಡಲಾಗದಿದ್ದಲ್ಲಿ ಇನ್ನೊಮ್ಮೆ ಓದಿ. *

## ಅಭೇದವು ಪ್ರಾಮಾಣಿಕವಲ್ಲ

ಮಂದಾರಮಂಜರೀ–

अभेदस्य प्रामाणिकत्वमेवासिद्धमिति परिहरति – **तदयुक्तमिति** ।।

ಅಭೇದಸ್ಯ ಪ್ರಾಮಾಣಿಕತ್ವಮೇವಾಸಿದ್ಧಮ್ ಇತಿ ಪರಿಹರತಿ - ತದಯುಕ್ತಮಿತಿ ।

ಅದ್ವೈತಿಗಳು ಹೇಳಿದಂತೆ ಐಕ್ಯವು ಪ್ರಮಾಣಸಿದ್ಧವಾಗಿದ್ದಲ್ಲಿ, ಪರಮಾತ್ಮನು ಅಗಣ್ಯಗುಣಗಳಿಗೆ ಆಶ್ರಯನಾಗಿದ್ದಾನೆಂಬುದು ಅಯುಕ್ತವಾಗುತ್ತಿತ್ತು. ಆದರೆ ಐಕ್ಯವು ಪ್ರಮಾಣಸಿದ್ಧವೇ ಆಗಿರುವುದಿಲ್ಲವೆಂದು ಅದ್ವೈತಿಗಳ ಆಕ್ಷೇಪವನ್ನು ಪರಿಹರಿಸುತ್ತಿದ್ದಾರೆ 'ತದಯುಕ್ತಮ್' ಇತ್ಯಾದಿ ಮೂಲದಿಂದ.

## ಅಧಿಕಾರಿಯ ಅರಿವು ಬೇಕು

ಮಂದಾರಮಂಜರೀ–

**यत्खल्वधिकारिति** ।। अधिकारिस्वरूपमात्रज्ञानस्य अधिकारिप्रवृत्तिहेतुत्वाभावेऽपि अधिकारिविशेषणापरिज्ञाने 'अहमधिकार्यस्मिन्न वा'

इति सन्देहेन प्रवृत्तिप्रतिबन्धात् अधिकारिविशेषणज्ञानमपि प्रवृत्त्यङ्गमिति भाव: ।।

ಯತ್ ಖಲು ಅಧಿಕಾರೀತಿ ॥ ಅಧಿಕಾರಿಸ್ವರೂಪಮಾತ್ರಜ್ಞಾನಸ್ಯ ಅಧಿಕಾರಿ-ಪ್ರವೃತ್ತಿಹೇತುತ್ವಾಭಾವೇಽಪಿ ಅಧಿಕಾರಿವಿಶೇಷಣಪರಿಜ್ಞಾನೇ 'ಅಹಮಧಿಕಾರ್ಯ-ಸ್ಮಿನ್ನ ವಾ' ಇತಿ ಸಂದೇಹೇನ ಪ್ರವೃತ್ತಿಪ್ರತಿಬಂಧಾತ್ ಅಧಿಕಾರಿವಿಶೇಷಣಜ್ಞಾನ-ಮಪಿ ಪ್ರವೃತ್ತ್ಯಂಗಮಿತಿ ಭಾವಃ।

ಕೇವಲ ಅಧಿಕಾರಿಸ್ವರೂಪಜ್ಞಾನವು ಅಧಿಕಾರಿಯ ಪ್ರವೃತ್ತಿಗೆ ಹೇತು ಆಗದಿರಬಹುದು ಆದರೂ ಕೂಡ ಯಾರು ಅಧಿಕಾರಿ? ಎಂಬ ವಿಶೇಷಣದ ಪರಿಜ್ಞಾನವಿಲ್ಲದಿದ್ದರೆ 'ನಾನು ಅಧಿಕಾರಿಯೋ ಅಲ್ಲವೋ' ಎಂಬ ಸಂದೇಹವು ಬರುವುದರಿಂದ ಗ್ರಂಥಾಧ್ಯಯನದಲ್ಲಿ ಪ್ರವೃತ್ತಿಯೇ ಉಂಟಾಗುವುದಿಲ್ಲ. ಹಾಗಾಗಿ ಅಧಿಕಾರಿವಿಶೇಷಣದ ಜ್ಞಾನವೂ ಕೂಡ ಗ್ರಂಥಾಧ್ಯಯನದ ಪ್ರವೃತ್ತಿಗೆ ಅಂಗವಾಗಿದೆ ಎಂದಭಿಪ್ರಾಯ.

## ಅನುಬಂಧಚತುಷ್ಟಯದ ಬಗ್ಗೆ ಒಂದು ವಿಚಾರ

ಪ್ರಶ್ನೆ - ಯಾವ ಗ್ರಂಥವು ಆರಂಭಣೀಯ?

ಉತ್ತರ – ಅನುಬಂಧ ಚತುಷ್ಟಯಗಳನ್ನು ಹೊಂದಿರುವ ಗ್ರಂಥವು ಮಾತ್ರ ಆರಂಭಮಾಡಲು ಯೋಗ್ಯ .

ಪ್ರಶ್ನೆ - ಅನುಬಂಧ ಚತುಷ್ಟಯ ಎಂದರೆ ಏನು?

ಉತ್ತರ – ವಿಷಯ, ಅಧಿಕಾರಿ, ಪ್ರಯೋಜನ, ಸಂಬಂಧಗಳನ್ನು ಅನುಬಂಧ-ಚತುಷ್ಟಯ ಎನ್ನುತ್ತಾರೆ.

ಪ್ರಶ್ನೆ – ವಿಷಯ, ಅಧಿಕಾರಿ, ಸಂಬಂಧ, ಪ್ರಯೋಜನಗಳ ಲಕ್ಷಣವೇನು?

ಉತ್ತರ – 1. ಗ್ರಂಥದಿಂದ ಪ್ರತಿಪಾದ್ಯವಾದ ವಸ್ತುವೇ ವಿಷಯ.

2. ಆ ಗ್ರಂಥದ ಅಧ್ಯಯನದಲ್ಲಿ ಆಸಕ್ತಿ ಇರುವವನು ಹಾಗೂ ಪ್ರಾಮಾಣಿಕವಾ ಅಧ್ಯಯನದಲ್ಲಿ ಆಸಕ್ತಿ ಇರುವವನು ಅಧಿಕಾರಿ ಎಂದು ಕರೆಸಿಕೊಳ್ಳುತ್ತಾನೆ.

3. ಗ್ರಂಥಾಧ್ಯಯನದಿಂದ ದೊರೆಯುವ ಫಲವು ಪ್ರಯೋಜನ ಎಂದ ಕರೆಸಿಕೊಳ್ಳುತ್ತದೆ.

4. ಇವುಗಳಿಗಿರುವ ಪರಸ್ಪರ ಸಂಬಂಧವೇ ಸಂಬಂಧವೆಂದು ಕರೆಸಿಕೊಳ್ಳುತ್ತದೆ.

ಪ್ರಶ್ನೆ – ಈ ಅನುಬಂಧಚತುಷ್ಟಯವು ಗ್ರಂಥದಲ್ಲಿ ಇದ್ದರೆ ಸಾಕು ಅದನ್ನು ನಾವೇ ತಿಳಿಯಬೇಕು?

ಉತ್ತರ – ಅನುಬಂಧಚತುಷ್ಟಯವನ್ನು ಅವಶ್ಯವಾಗಿ ತಿಳಿಯಲೇಬೇಕು.

ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
ಸ್ಮೃತ್ವಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ಫಲಮ್ ॥

(ಭಾಗ. ೧.೧.೧೨)

ಅಧಿಕಾರ ಪ್ರಯೋಜನ ಪ್ರತಿಪಾದ್ಯವಿಷಯ ಸಂಬಂಧ ಇವುಗಳ ಸ್ಮರಣೆ ಮಾಡಿ ಗ್ರಂಥವನ್ನು ಪ್ರಾರಂಭಿಸುವವನಿಗೆ ಭಗವಂತನು ಮಹಾಫಲವನ್ನು ದಯ-ಪಾಲಿಸುತ್ತಾನೆ.

ಭಾಗವತಪ್ರಥಮಸ್ಕಂಧದ ತಾತ್ಪರ್ಯದಲ್ಲಿ ಉಲ್ಲೇಖಮಾಡಿದ ಈ ಶ್ಲೋಕವನ್ನು ಶ್ರೀಮಟ್ಟೀಕಾರಾಯರು ತತ್ವಪ್ರಕಾಶಿಕೆಯ ಜಿಜ್ಞಾಸಾಧಿಕರಣದಲ್ಲಿ ಉಲ್ಲೇಖ ಮಾಡಿದ್ದಾರೆ.

ಪ್ರಶ್ನೆ - ಅನುಬಂಧಚತುಷ್ಟಯವನ್ನು ತಿಳಿಯುವ ಕ್ರಮ ಹೇಗೆ?

ಉತ್ತರ – ಗ್ರಂಥವನ್ನು ಅಧ್ಯಯನ ಮಾಡುವ ಮೊದಲು ಪ್ರತಿಯೊಬ್ಬರಿಗೂ ಈ ಗ್ರಂಥ ಏನನ್ನು ಹೇಳಲು ಹೊರಟಿದೆ ಎಂಬುದರ ಬಗ್ಗೆ ಕುತೂಹಲ ಹುಟ್ಟುತ್ತದೆ. ಅನಂತರ ಅಧ್ಯಯನ ಮಾಡಿದ ನನಗೇನು ಪ್ರಯೋಜನ? ಎಂಬ ಪ್ರಶ್ನೆ ಬರುತ್ತದೆ. ಅನಂತರ ಈ ಗ್ರಂಥವನ್ನು ನಾನು ಓದಬಹುದೇ? ಎಂಬ ಜಿಜ್ಞಾಸೆಯು ಹುಟ್ಟ ಇವುಗಳಿಗಿರುವ ಪರಸ್ಪರಸಂಬಂಧದ ಬಗ್ಗೆ ಪ್ರಶ್ನೆ ಬರುತ್ತದೆ. ಆದ್ದರಿಂದ ಗ್ರಂಥದ

ಪ್ರಾರಂಭದಲ್ಲಿ ಅಧಿಕಾರಿ, ವಿಷಯ, ಪ್ರಯೋಜನ ಹಾಗೂ ಸಂಬಂಧಗಳ ಬಗ್ಗೆ ಅವಶ್ಯವಾಗಿ ತಿಳಿಯಲೇಬೇಕು.

ಪ್ರಶ್ನೆ - ಅನುಬಂಧಚತುಷ್ಟಯದ ಜ್ಞಾನದಿಂದ ಗ್ರಂಥಾಧ್ಯಯನದಲ್ಲಿ ತೊಡಗುತ್ತೇವೆ. ಆದ್ದರಿಂದ ಲೌಕಿಕ ಫಲಮಾತ್ರವಷ್ಟೇ ಇದೆ ಹೊರತು ಅಲೌಕಿಕ ಫಲ ಇರುವುದಿಲ್ಲ ಅಲ್ಲವೇ?

ಉತ್ತರ – ಅನುಬಂಧಚತುಷ್ಟಯ ತಿಳಿಯುವುದರಿಂದ ಲೌಕಿಕಫಲ ಮಾತ್ರವಲ್ಲ. ಪುಣ್ಯದ ಲಾಭವು ಕೂಡ ಇದೆ. ಆದ್ದರಿಂದಲೇ ಪ್ರಮಾಣ ಶ್ಲೋಕದಲ್ಲಿ "ಕರೋತೀಶೋ ಮಹತ್ಫಲಮ್" ಈಶನು ಮಹಾಪುಣ್ಯಫಲವನ್ನು ನೀಡುತ್ತಾನೆ ಎಂಬುದಾಗಿ ಹೇಳಲ್ಪಟ್ಟಿದೆ.

ಪ್ರಶ್ನೆ - ನೀವು ಹೇಳಿದಂತೆ ವಿಷಯ, ಪ್ರಯೋಜನ ಸಂಬಂಧಗಳನ್ನು ಗ್ರಂಥಾ-ರಂಭದಲ್ಲಿ ತಿಳಿಯಲೇ ಬೇಕು. ಆದರೆ ಅಧಿಕಾರಿಯ ಬಗ್ಗೆ ಏಕೆ ತಿಳಿಯಬೇಕು. ಆದ್ದರಿಂದ ಅನುಬಂಧಚತುಷ್ಟಯದ ಜ್ಞಾನ ಅನಾವಶ್ಯಕ. ಕೇವಲ ಮೂರನ್ನು ತಿಳಿದರೆ ಸಾಕಲ್ಲವೇ?

ಉತ್ತರ – ಯಾರು ಈ ಗ್ರಂಥವನ್ನು ಓದಲು ಅಧಿಕಾರಿ ಎಂಬುದನ್ನು ತಿಳಿಯಲೇ ಬೇಕು. ಇಲ್ಲದಿದ್ದರೆ ನಾನು ಈ ಗ್ರಂಥವನ್ನು ಓದಲು ಅಧಿಕಾರಿಯು ಹೌದೋ ಅಲ್ಲವೋ? ಎಂಬ ಸಂಶಯವು ಬರುತ್ತದೆ. ಹೀಗೆ ಸಂಶಯ ಬಂದರೆ ಗ್ರಂಥದ ಅಧ್ಯಯನದಲ್ಲಿ ಪ್ರವೃತ್ತಿಯೇ ಉಂಟಾಗುವುದಿಲ್ಲ. ಹಾಗಾಗಿ ವಿಷಯಾದಿಗಳಂತೆ ಅಧಿಕಾರಿ ಜ್ಞಾನವೂ ಕೂಡ ಪ್ರವೃತ್ತಿಗೆ ಅಂಗವೇ ಆಗಿದೆ ಎಂದು ತಿಳಿಯಬೇಕು. ಆದ್ದರಿಂದ ಅನುಬಂಧಚತುಷ್ಟಯಗಳ ವಿಷಯ ಗ್ರಂಥದಲ್ಲಿ ಇರಲೇಬೇಕು. ಅವುಗಳ ಜ್ಞಾನವನ್ನೂ ಕೂಡ ವಿದ್ಯಾರ್ಥಿಯಾದವನು ಹೊಂದಲೇ ಬೇಕು.

## ಅಜ್ಞಾನಕ್ಕೆ ಆಶ್ರಯ-ವಿಷಯಗಳಿವೆ

ಮಂದಾರಮಂಜರೀ–

**अधिकार्यादीति** ।। अज्ञानिनोऽधिकारित्वात् अज्ञातस्य विषयत्वात् अज्ञाननिवृत्तेश्च प्रयोजनत्वादिति भावः । सर्वज्ञस्याज्ञानं न घटते चेत्

'निराश्रयमज्ञानमस्तु' इत्याशङ्क्य साश्रयत्वनियममाह – **अज्ञानं हि कस्यचिदिति** ।। सविषयत्वं चाङ्गीकरणीयमित्याह – **कचिदिति** ।। 'अस्य अत्र अज्ञानं' इत्यनुभवादज्ञानस्य विषयसापेक्षत्वम् आश्रय-सापेक्षत्वम् अङ्गीकर्तव्यमिति हिशब्दार्थः ।

**ಅಧಿಕಾರ್ಯಾದೀತಿ ॥ ಅಜ್ಞಾನಿನಃ ಅಧಿಕಾರಿತ್ವಾತ್ ಅಜ್ಞಾತಸ್ಯ ವಿಷಯ-ತ್ವಾತ್ ಅಜ್ಞಾನನಿವೃತ್ತೇಶ್ಚ ಪ್ರಯೋಜನತ್ವಾದಿತಿ ಭಾವಃ । ಸರ್ವಜ್ಞಸ್ಯಾಜ್ಞಾನಂ ನ ಘಟತೇ ಚೇತ್ 'ನಿರಾಶ್ರಯಮ್ ಅಜ್ಞಾನಮಸ್ತು' ಇತ್ಯಾಶಂಕ್ಯ ಸಾಶ್ರಯತ್ವ-ನಿಯಮಮಾಹ – ಅಜ್ಞಾನಂ ಹಿ ಕಸ್ಯಚಿದಿತಿ ॥ 'ಅಸ್ಯ ಅತ್ರ ಅಜ್ಞಾನಮ್' ಇತ್ಯನುಭವಾದಜ್ಞಾನಸ್ಯ ವಿಷಯಸಾಪೇಕ್ಷತ್ವಮ್ ಆಶ್ರಯಸಾಪೇಕ್ಷತ್ವಮ್ ಅಂಗೀಕರ್ತವ್ಯಮಿತಿ 'ಹಿ'ಶಬ್ದಾರ್ಥಃ।**

'ಅಧಿಕಾರ್ಯಾದಿಸಿದ್ಧೇಃ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ – ಅಜ್ಞಾನಿಯೇ ಅಧಿಕಾರಿಯಾಗಿದ್ದಾನೆ. ಅಜ್ಞಾತವಾದದ್ದು ವಿಷಯವಾಗಿದೆ. ಅಜ್ಞಾನನಿವೃತ್ತಿಯು ಪ್ರಯೋಜನವಾಗಿದೆ. ಹೀಗೆ ಎಲ್ಲವೂ ಅಜ್ಞಾನಗರ್ಭಿತ-ವಾದ್ದರಿಂದ ಅಜ್ಞಾನವು ಸಿದ್ಧವಾದರೆ ಮಾತ್ರ ಅಧಿಕಾರಿ, ವಿಷಯ, ಪ್ರಯೋ-ಜನಗಳು ಸಿದ್ಧವಾಗುತ್ತವೆ.

ಸರ್ವಜ್ಞನಾದ ಬ್ರಹ್ಮನಲ್ಲಿ ಅಜ್ಞಾನವು ಬರಲು ಹೇಗೆ ಸಾಧ್ಯ ? ಎಂದು ಪ್ರಶ್ನಿಸಿದಾಗ, 'ನಿರಾಶ್ರಯಮ್ ಅಜ್ಞಾನಮಸ್ತು' ಅಜ್ಞಾನಕ್ಕೆ ಆಶ್ರಯವು ಇರುವುದೇ ಬೇಡ ಎಂಬ ಆಶಂಕೆಗೆ ಅಜ್ಞಾನವು ನಿರಾಶ್ರಿತವಾಗಿರಲು ಸಾಧ್ಯವಿಲ್ಲವೆಂಬ ನಿಯಮವನ್ನು ಹೇಳುತ್ತಿದ್ದಾರೆ 'ಅಜ್ಞಾನಮ್ ಹಿ' ಎಂಬ ವಾಕ್ಯದಿಂದ.

'ಕಸ್ಯಚಿತ್' ಎಂಬ ಪದದಿಂದ ಅಜ್ಞಾನವು ನಿರಾಶ್ರಿತವಲ್ಲ ಎಂದು ಹೇಳಿ-

ದಂತಾಯಿತು. ಅಷ್ಟೇ ಅಲ್ಲದೆ ಸವಿಷಯಕವೂ ಆಗಿದೆ ಎಂಬುದನ್ನು ಕ್ವಚಿತ್ ಎಂಬ ಪದದಿಂದ ಸಮರ್ಥಿಸುತ್ತಿದ್ದಾರೆ. ಏಕೆಂದರೆ 'ಅಸ್ಯ ಅತ್ರ ಅಜ್ಞಾನಂ' ಈ ವ್ಯಕ್ತಿಗೆ ಇಂತಹ ವಿಷಯದಲ್ಲಿ ಅಜ್ಞಾನವಿದೆ'' ಎಂಬ ಅನುಭವವು ಎಲ್ಲರಿಗೂ ಇರುವುದರಿಂದ ಅಜ್ಞಾನವು ವಿಷಯಸಾಪೇಕ್ಷಿತವಾಗಿದೆ ಎಂಬುದನ್ನು ಅತ್ಯ-ವಶ್ಯಕವಾಗಿ ಒಪ್ಪಲೇಬೇಕು. ಇದನ್ನು 'ಹಿ'ಶಬ್ದವು ಸೂಚಿಸುತ್ತಿದೆ.

## ಆಶ್ರಯ ಪರಮಾತ್ಮ

ಮಂದಾರಮಂಜರೀ–

नन्वथापि परमात्मातिरिक्त एवाश्रयोऽस्त्वित्यत आह– **न चेति** ।।

ನನ್ವಥಾಪಿ ಪರಮಾತ್ಮಾತಿರಿಕ್ತ ಏವಾಶ್ರಯೋಽಸ್ತು ಇತ್ಯತ ಆಹ – ನಚೇತಿ ॥

ಅಜ್ಞಾನವು ಸವಿಷಯಕವೆಂದು ಒಪ್ಪೋಣ; ಅಂದಮಾತ್ರಕ್ಕೆ ಪರಮಾತ್ಮನೇ ಅಜ್ಞಾನಕ್ಕೆ ಆಶ್ರಯನಾಗಬೇಕಿಲ್ಲ. ಪರಮಾತ್ಮನಿಗಿಂತ ಅತಿರಿಕ್ತವಾದ ವಸ್ತು ಅಜ್ಞಾನಕ್ಕೆ ಆಶ್ರಯವಾಗಬಹುದಲ್ಲವೆ? ಈ ಪ್ರಶ್ನೆಗೆ 'ನ ಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

## ಪರಮಾತ್ಮಾತಿರಿಕ್ತವಾದದ್ದು ಇಲ್ಲ

ಮಂದಾರಮಂಜರೀ–

परमात्मातिरिक्तम् अज्ञानाधिकरणं पारमार्थिकम् ? किं वा अपार-मार्थिकम्? आद्यं दूषयति – **वस्तु न विद्यत इति** ।।

ಪರಮಾತ್ಮಾತಿರಿಕ್ತಮ್ ಅಜ್ಞಾನಾಧಿಕರಣಂ ಪಾರಮಾರ್ಥಿಕಮ್? ಕಿಂ ವಾ ಅಪಾರಮಾರ್ಥಿಕಮ್? ಆದ್ಯಂ ದೂಷಯತಿ – ವಸ್ತು ನ ವಿದ್ಯತ ಇತಿ ॥

ಪರಮಾತ್ಮನಿಗಿಂತ ಅತಿರಿಕ್ತವಾದ ವಸ್ತು ಅಜ್ಞಾನಕ್ಕೆ ಅಧಿಕರಣವಾದರೆ ಆ

ವಸ್ತುವು ಪಾರಮಾರ್ಥಿಕವೋ, ಅಪಾರಮಾರ್ಥಿಕವೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಪ್ರಥಮ ಪಕ್ಷದಲ್ಲಿ 'ವಸ್ತು ನ ವಿದ್ಯತೇ' ಎಂಬುದರಿಂದ ಉತ್ತರಿಸಿದ್ದಾರೆ. ಅದ್ವೈತಿಗಳು ಪರಮಾತ್ಮನಿಗಿಂತ ಅತಿರಿಕ್ತವಾದ ಯಾವುದೇ ವಸ್ತುವನ್ನು ಪಾರಮಾರ್ಥಿಕವೆಂದು ಒಪ್ಪಿರುವುದಿಲ್ಲ.

## ಅನ್ಯೋನ್ಯಾಶ್ರಯ

ಮಂದಾರಮಂಜರೀ–

द्वितीये तस्याज्ञानकल्पितत्वादन्योन्याश्रयः स्यादिति भावः । फलितं दर्शयति – **इतीति** ।।

ದ್ವಿತೀಯೇ ತಸ್ಯಾಜ್ಞಾನಕಲ್ಪಿತತ್ವಾದನ್ಯೋನ್ಯಾಶ್ರಯಃ ಸ್ಯಾದಿತಿ ಭಾವಃ । ಫಲಿತಂ ದರ್ಶಯತಿ – ಇತೀತಿ ॥

ಅಪಾರಮಾರ್ಥಿಕವಾದ ವಸ್ತುವೇ ಅಜ್ಞಾನಕ್ಕೆ ಅಧಿಕರಣವಾಗಿದೆ ಎಂದು ಹೇಳುವುದಾದರೆ, ಅನ್ಯೋನ್ಯಾಶ್ರಯದೋಷ ಬರುತ್ತದೆ. ಏಕೆಂದರೆ ಅಪಾರಮಾರ್ಥಿಕವೆಂಬ ಶಬ್ದಕ್ಕೆ ಅಜ್ಞಾನಕಲ್ಪಿತ ಎಂಬರ್ಥವನ್ನು ಅದ್ವೈತಿಗಳು ಹೇಳುತ್ತಾರೆ. ಯಾವ ವಸ್ತುವು ಅಜ್ಞಾನಕ್ಕೆ ಆಶ್ರಯವಾಗಿದೆಯೋ ಅದು ಅಜ್ಞಾನಕಲ್ಪಿತ ಎಂದು ಹೇಳಿದರೆ; ಅಜ್ಞಾನವಿರಬೇಕಾದರೆ ಅಜ್ಞಾನಕಲ್ಪಿತವಸ್ತು ಮೊದಲು ಇರಬೇಕು. ಅಜ್ಞಾನಕಲ್ಪಿತವಾದ ವಸ್ತು ಮೊದಲು ಇರಬೇಕಾದರೆ ಅಜ್ಞಾನದಿಂದ ಕಲ್ಪಿತವಾದ ಕಾರಣ ಅಜ್ಞಾನವೇ ಮೊದಲಿರಬೇಕು. ಅಜ್ಞಾನವಿಲ್ಲದೆ ಅಜ್ಞಾನಕಲ್ಪಿತವಸ್ತು ಇರಲು ಸಾಧ್ಯವಿಲ್ಲ. ಅಜ್ಞಾನಕಲ್ಪಿತವಾದ ವಸ್ತು ಇಲ್ಲದಿದ್ದರೆ ಅಜ್ಞಾನವು ಇರಲು ಸಾಧ್ಯವಿಲ್ಲ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಹೀಗೆ ಎರಡೂ ಪಕ್ಷಗಳಲ್ಲಿ ದೋಷವು ಪ್ರಾಪ್ತವಾಗುವುದರಿಂದ ಏನು ಹೇಳಬೇಕೆಂಬ ಫಲಿತಾಂಶವನ್ನು "ಇತಿ" ಎಂಬುದರಿಂದ ತೋರಿಸುತ್ತಿದ್ದಾರೆ.

## ಸರ್ವಜ್ಞನಾದರೂ ಅಜ್ಞಾನವಿರಲಿ

ಮಂದಾರಮಂಜರೀ–

सर्वज्ञस्यापि दोषबलादज्ञानं किं न स्यात्? इत्यत आह – **कुत-श्चनेति** ।।

**ಸರ್ವಜ್ಞಸ್ಯಾಪಿ ದೋಷಬಲಾದಜ್ಞಾನಂ ಕಿಂ ನ ಸ್ಯಾತ್? ಇತ್ಯತ ಆಹ – ಕುತಶ್ಚನೇತಿ ॥**

ಹಾಗಾದರೆ ಅಜ್ಞಾನವನ್ನು ಬೇರೆಲ್ಲೂ ಒಪ್ಪುವುದಿಲ್ಲ. ಪರಮಾತ್ಮನಲ್ಲೇ ಒಪ್ಪುತ್ತೇವೆ. ಅಂತಹ ಪರಮಾತ್ಮನು ಸರ್ವಜ್ಞನಾಗಿದ್ದರೂ ಕೂಡ ದೋಷ-ವಶಾತ್ ಅಜ್ಞಾನಕ್ಕೂ ಆಶ್ರಯನಾಗಿದ್ದಾನೆ ಎಂದು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ ''ಕುತಶ್ಚನ'' ಎಂಬುದರಿಂದ ಉತ್ತರಿಸಿದ್ದಾರೆ.

## ಪುನಃ ಅನ್ಯೋನ್ಯಾಶ್ರಯ

ಮಂದಾರಮಂಜರೀ–

दोषस्याप्यविद्यां विना असम्भवादिति भावः । अथवा कुतश्चनेति प्रतीकमुपादाय कुत्र चेति तद्व्याख्या । एवं च विषयासम्भवप्रतिपादनमपि कारिकारूढं भवति ।

**ದೋಷಸ್ಯಾಪ್ಯವಿದ್ಯಾಂ ವಿನಾ ಅಸಂಭವಾದಿತಿ ಭಾವಃ। ಅಥವಾ 'ಕುತಶ್ಚನ' ಇತಿ ಪ್ರತೀಕಮುಪಾದಾಯ 'ಕುತ್ರ ಚ' ಇತಿ ತದ್ವ್ಯಾಖ್ಯಾ । ಏವಂ ಚ ವಿಷಯಾಸಂಭವಪ್ರತಿಪಾದನಮಪಿ ಕಾರಿಕಾರೂಢಂ ಭವತಿ।**

ದೋಷಾಧೀನವಾಗಿ ಪರಮಾತ್ಮನು ಅಜ್ಞಾನಕ್ಕೆ ಆಶ್ರಯನಾಗಿದ್ದಾನೆ ಎಂದು ಹೇಳುವುದಾದರೆ ಪುನಃ ಅನ್ಯೋನ್ಯಾಶ್ರಯದೋಷ ಬರುತ್ತದೆ. ಏಕೆಂದರೆ

ಯಾವುದೇ ದೋಷ ಬರಬೇಕಾದರೆ ಅಜ್ಞಾನದ ಅಧೀನವಾಗಿಯೇ ಬರಬೇಕು. ಅಜ್ಞಾನವಿಲ್ಲದೆ ದೋಷವನ್ನು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲವೆಂಬುದು ''ಕುತಶ್ಚನ'' ಎಂಬ ಪದದ ಅಭಿಪ್ರಾಯವಾಗಿದೆ. ಅಥವಾ 'ಕುತಶ್ಚನ' ಎಂಬುದು ಶ್ರೀಮದಾಚಾರ್ಯರ ಶ್ಲೋಕದಲ್ಲಿರುವ ಪ್ರತೀಕಗ್ರಹಣ ಮಾಡಿದ್ದಾರೆ. ಅದಕ್ಕೆ 'ಕುತ್ರ ಚ' ಎಂದು ವ್ಯಾಖ್ಯಾನಮಾಡಿದ್ದಾರೆ ಎಂದು ತಿಳಿಯಬೇಕು.

ಹೀಗೆ ವ್ಯಾಖ್ಯಾನ ಮಾಡುವುದರಿಂದ ಅದ್ವೈತಮತದಲ್ಲಿ ವಿಷಯವು ಸಹ ಯುಕ್ತವಾಗುವುದಿಲ್ಲವೆಂಬುದನ್ನು ಶ್ರೀಮದಾಚಾರ್ಯರ ಶ್ಲೋಕದಿಂದಲೇ ತಿಳಿಸಿದಂತಾಗುತ್ತದೆ.

## ವಿಷಯವಿಲ್ಲದ್ದರಿಂದ ಅಜ್ಞಾನವಿಲ್ಲ

ಮಂದಾರಮಂಜರೀ–

ततश्च विषयासम्भवेनाज्ञानासम्भवमुपपादयितुम् 'अज्ञानं हि क्वचिद् भवति' इत्यज्ञानस्य सविषयत्वसमर्थनं टीकाकारीयं सङ्गच्छते । उक्तार्थे हेतुमाह – **सर्वज्ञत्वादिति** ।।

ತತಶ್ಚ ವಿಷಯಾಸಂಭವೇನಾಜ್ಞಾನಾಸಂಭವಮ್ ಉಪಪಾದಯಿತುಮ್ 'ಅಜ್ಞಾನಂ ಹಿ ಕ್ವಚಿದ್ಭವತಿ' ಇತ್ಯಜ್ಞಾನಸ್ಯ ಸವಿಷಯತ್ವಸಮರ್ಥನಂ ಟೀಕಾಕಾರೀಯಂ ಸಂಗಚ್ಛತೇ। ಉಕ್ತಾರ್ಥೇ ಹೇತುಮಾಹ – ಸರ್ವಜ್ಞತ್ವಾದಿತಿ ॥

ಅದ್ವೈತಮತದಲ್ಲಿ ವಿಷಯವೇ ಯುಕ್ತವಾಗುವುದಿಲ್ಲ. ಆದ್ದರಿಂದ ಅಜ್ಞಾನವೂ ಸಹ ಕೂಡುವುದಿಲ್ಲ. ಇದನ್ನು ಉಪಪಾದನೆ ಮಾಡಲು 'ಅಜ್ಞಾನಂ ಹಿ ಕ್ವಚಿತ್ ಭವತಿ' 'ಅಜ್ಞಾನವು ಎಲ್ಲಿಯಾದರೂ ಇರಲೇಬೇಕು' ಎಂಬುದಾಗಿ ಅಜ್ಞಾನಕ್ಕೆ ಸವಿಷಯತ್ವವನ್ನು ಟೀಕೆಯಲ್ಲಿ ಸಮರ್ಥನೆ ಮಾಡಿದ್ದು ಯುಕ್ತವಾ-

ಗುತ್ತದೆ. ಅಜ್ಞಾನಕ್ಕೆ ವಿಷಯವೇ ಇಲ್ಲದ ಕಾರಣ ಅಜ್ಞಾನವೂ ಕೂಡುವುದಿಲ್ಲ-ವೆಂಬುದು ಟೀಕೆಯ ಅಭಿಪ್ರಾಯ. ''ಕುತಶ್ಚನ'' ಎಂಬ ಪದಕ್ಕೆ 'ಕುತ್ರ ಚ' ಎಂದು ವ್ಯಾಖ್ಯಾನ ಮಾಡಿದ್ದರಿಂದ ಟೀಕೆಯ ಈ ಅಭಿಪ್ರಾಯವು ಶ್ರೀಮದಾ-ಚಾರ್ಯರ ಮಾತಿನಿಂದಲೇ ನೇರವಾಗಿ ತಿಳಿದಂತಾಗುತ್ತದೆ. ಇಲ್ಲಿಯ ತನಕ ಹೇಳಿದ ಅರ್ಥದಲ್ಲಿ ಕಾರಣವನ್ನು 'ಸರ್ವಜ್ಞತ್ವಾತ್' ಎಂಬುದರಿಂದ ನಿರೂಪಣೆ ಮಾಡುತ್ತಿದ್ದಾರೆ.

## ಈಶ್ವರನಲ್ಲಿ ಅಜ್ಞಾನ ಸರ್ವಥಾ ಇಲ್ಲ

**ಮಂದಾರಮಂಜರೀ–**

समानाश्रयसमानविषयकज्ञानाज्ञानयोर्विरोधात् ईश्वरज्ञानस्य च सर्व-विषयकत्वात् न तस्य किञ्चिद्विषयकमज्ञानं सम्भवतीत्यर्थः । उपसंहरति – **अत इति ।।**

**ಸಮಾನಾಶ್ರಯಸಮಾನವಿಷಯಕಜ್ಞಾನಾಜ್ಞಾನಯೋಃ ವಿರೋಧಾತ್ ಈಶ್ವರಜ್ಞಾನಸ್ಯ ಚ ಸರ್ವವಿಷಯಕತ್ವಾತ್ ನ ತಸ್ಯ ಕಿಂಚಿದ್ವಿಷಯಕ- ಮಜ್ಞಾನಂ ಸಂಭವತೀತ್ಯರ್ಥಃ। ಅತ ಇತಿ ॥**

ಸಮಾನವಾದ ಆಶ್ರಯವುಳ್ಳ, ಸಮಾನವಾದ ವಿಷಯವುಳ್ಳ, ಜ್ಞಾನ ಮತ್ತು ಅಜ್ಞಾನಗಳಿಗೆ ಪರಸ್ಪರ ವಿರೋಧವಿದೆ. ಒಂದೇ ಆಶ್ರಯದಲ್ಲಿ ಜ್ಞಾನ ಹಾಗೂ ಅಜ್ಞಾನಗಳೆರಡು ಒಟ್ಟಿಗೆ ಇರಲು ಸಾಧ್ಯವಿಲ್ಲ ಮತ್ತು ಒಂದೇ ವಿಷಯ-ದಲ್ಲಿಯೂ ಜ್ಞಾನ ಮತ್ತು ಅಜ್ಞಾನಗಳು ಒಟ್ಟಿಗೆ ಇರಲು ಸಾಧ್ಯವಿಲ್ಲ ಎಂಬ ವಿಷಯವು ಇದುವರೆಗೆ ಸಿದ್ಧವಾಯಿತು. ಈಶ್ವರನ ಜ್ಞಾನವಾದರೂ ಸಹ ಎಲ್ಲವನ್ನೂ ವಿಷಯೀಕರಿಸುತ್ತಿದೆ ಆದ್ದರಿಂದ ಯಾವುದೇ ವಿಷಯದಲ್ಲಿಯೂ ಅಜ್ಞಾನವನ್ನು ಈಶ್ವರನಲ್ಲಿ ಒಪ್ಪಲು ಸಾಧ್ಯವಿಲ್ಲ.

ಸರ್ವವಿಷಯಕವಾದ ಮತ್ತು ಆಶ್ರಯನಾದ ಈಶ್ವರನಲ್ಲಿ ಅಜ್ಞಾನವನ್ನು ಒಪ್ಪಲು ಸಾಧ್ಯವೇ ಇರುವುದಿಲ್ಲ. ಇದುವರೆಗೂ ಹೇಳಿದ ಸಮಗ್ರ ಅಭಿಪ್ರಾಯವನ್ನು "ಅತಃ" ಎಂದು ಉಪಸಂಹಾರ ಮಾಡುತ್ತಿದ್ದಾರೆ.

## ಅದ್ವೈತಿಗಳ ಆಕ್ಷೇಪ

ಮಂದಾರಮಂಜರೀ–

ननु कथमत्र प्रयोगः? अज्ञानं नास्ति आश्रयसापेक्षत्वे सति तद्रहितत्वात्, विषयसापेक्षत्वे सति तद्रहितत्वाद्वा, साश्रयनिराश्रयान्यतरानन्तर्भावाद्वा, सविषयनिर्विषयान्यतरानन्तर्भावाद्वा इत्यादिषु आश्रयासिद्धेः ।

ನನು ಕಥಮತ್ರ ಪ್ರಯೋಗಃ? ಅಜ್ಞಾನಂ ನಾಸ್ತಿ ಆಶ್ರಯಸಾಪೇಕ್ಷತ್ವೇ ಸತಿ ತದ್ರಹಿತತ್ವಾತ್, ವಿಷಯಸಾಪೇಕ್ಷತ್ವೇ ಸತಿ ತದ್ರಹಿತತ್ವಾದ್ವಾ, ಸಾಶ್ರಯನಿರಾಶ್ರಯಾನ್ಯತರಾನಂತರ್ಭಾವಾದ್ವಾ, ಸವಿಷಯನಿರ್ವಿಷಯಾನ್ಯತರಾನಂತರ್ಭಾವಾದ್ವಾ ಇತ್ಯಾದಿಷು ಆಶ್ರಯಾಸಿದ್ಧೇಃ ॥

ತತ್ವವಾದಿಗಳಾದ ನೀವು ಅನುಮಾನವನ್ನು ಹೇಗೆ ಪ್ರಯೋಗ ಮಾಡುವಿರಿ?

1. ಅಜ್ಞಾನಂ ನಾಸ್ತಿ ಆಶ್ರಯಸಾಪೇಕ್ಷತ್ವೇ ಸತಿ ತದ್‌ರಹಿತತ್ವಾತ್- ಅಜ್ಞಾನವು ಆಶ್ರಯದ ಆಪೇಕ್ಷಯುಳ್ಳದ್ದಾಗಿದೆ ಆದರೆ ಆಶ್ರಯವಿಲ್ಲದ್ದರಿಂದ ಇರುವುದೇ ಇಲ್ಲ ಎಂದೋ?

2. ಅಜ್ಞಾನಂ ನಾಸ್ತಿ ವಿಷಯಸಾಪೇಕ್ಷತ್ವೇ ಸತಿ ತದ್ ರಹಿತತ್ವಾತ್- ಅಜ್ಞಾನವು ವಿಷಯದ ಅಪೇಕ್ಷೆಯುಳ್ಳದ್ದಾಗಿದೆ ಆದರೆ ವಿಷಯವೇ ಇಲ್ಲದ್ದರಿಂದ ಇರುವುದೇ ಇಲ್ಲ ಎಂದೋ?

3. ಅಜ್ಞಾನಂ ನಾಸ್ತಿ ಸಾಶ್ರಯನಿರಾಶ್ರಯಾನ್ಯತರಾನಂತರ್ಭಾವಾತ್-ಅಜ್ಞಾನವು ಸಾಶ್ರಯಪದಾರ್ಥದಲ್ಲಿ ಸೇರಬೇಕೋ ಅಥವಾ ನಿರಾಶ್ರಯ-ಪದದಲ್ಲಿ ಸೇರಬೇಕೋ? ಎರಡರಲ್ಲೂ ಸೇರುತ್ತಾ ಇರುವುದೇ ಇಲ್ಲ ಎಂದೋ

4. ಅಜ್ಞಾನಂ ನಾಸ್ತಿ ಸವಿಷಯನಿರ್ವಿಷಯಾನ್ಯತರಾನಂತರ್ಭಾವಾತ್ - ಅಜ್ಞಾನವು ಸವಿಷಯಪದಾರ್ಥದಲ್ಲೂ ಸೇರುತ್ತಿಲ್ಲ, ನಿರ್ವಿಷಯ-ಪದಾರ್ಥದಲ್ಲೂ ಸೇರುತ್ತಿಲ್ಲ. ಆದ್ದರಿಂದ ಅದು ಇರುವುದೇ ಇಲ್ಲ ಎಂದೋ.

ಹೀಗೆ ಯಾವುದೇ ರೀತಿಯಲ್ಲಿ ಅನುಮಾನವನ್ನು ಪ್ರಯೋಗ ಮಾಡಿ-ದರೂ ಆಶ್ರಯಾಸಿದ್ಧಿದೋಷವು ತತ್ವವಾದಿಗಳಿಗೆ ಪ್ರಾಪ್ತವಾಗುತ್ತದೆ.

ವಿವರಣೆ – ಟೀಕೆಯಲ್ಲಿ 'ವ್ಯಾಪಕೀಭೂತಾಶ್ರಯವಿಷಯಾನುಪಪತ್ತ್ಯಾ ವ್ಯಾಪ್ಯ-ಸ್ಯಾಜ್ಞಾನಸ್ಯಾಪಿ ಅನುಪಪತ್ತಿಃ' ಎಂದು ಹೇಳಿದರು. ವ್ಯಾಪಕೀಭೂತವಾದ ಆಶ್ರಯ ಹಾಗೂ ವಿಷಯಗಳು ಕೂಡುವುದಿಲ್ಲವಾದ್ದರಿಂದ ವ್ಯಾಪ್ಯವಾದ ಅಜ್ಞಾನವು ಕೂಡ ಅನುಪಪನ್ನವಾಗುತ್ತದೆ ಎಂದು ಟೀಕೆಯಲ್ಲಿ ಹೇಳಿದರು. ಈ ಮಾತಿನ ಅಭಿ-ಪ್ರಾಯವೇನು ಎಂಬುದಾಗಿ ಅದ್ವೈತಿಯು ಆಕ್ಷೇಪ ಮಾಡುತ್ತಾನೆ. ಅದನ್ನು ಮಂದಾರಮಂಜರಿಯಲ್ಲಿ 'ನನು ಕಥಮತ್ರಪ್ರಯೋಗಃ' ಎಂಬ ವಾಕ್ಯದಿಂದ ತಸ್ಮಾತ್ 'ವ್ಯಾಪ್ಯಸ್ಯಾಜ್ಞಾನಸ್ಯಾಪ್ಯಭಾವಃ' ಇತಿ ಕಥಮುಕ್ತಮ್ ಇತಿ ಚೇತ್' ಎಂಬ ವಾಕ್ಯದ ತನಕ ಅನುವಾದ ಮಾಡಿದ್ದಾರೆ. ಆದ್ದರಿಂದ ಇದೆಲ್ಲವೂ ಅದ್ವೈತಿಗಳ ಆಕ್ಷೇಪವೆಂದು ತಿಳಿಯಬೇಕು.

ಮಂದಾರಮಂಜರೀ–

अथैवं प्रयोग:, प्रमेयत्वं साश्रयनिराश्रयान्यतरमात्रनिष्ठं सविषय-निर्विषयान्यतरमात्रनिष्ठं वा धर्मत्वात् घटत्वदिति । अनेन चानुमानद्वयेन साश्रयनिराश्रयसविषयनिर्विषयानन्तर्भाविनोऽज्ञानस्य असत्वमापाद्यत इति चेत्

**ಅಥೈವಂ ಪ್ರಯೋಗಃ – 'ಪ್ರಮೇಯತ್ವಂ ಸಾಶ್ರಯನಿರಾಶ್ರಯಾನ್ಯತರ-ಮಾತ್ರನಿಷ್ಠಂ ಸವಿಷಯನಿರ್ವಿಷಯಾನ್ಯತರಮಾತ್ರನಿಷ್ಠಂ ವಾ, ಧರ್ಮತ್ವಾತ್ ಘಟವತ್' ಇತಿ । ಅನೇನ ಚಾನುಮಾನದ್ವಯೇನ ಸಾಶ್ರಯನಿರಾಶ್ರಯ-ಸವಿಷಯನಿರ್ವಿಷಯಾನಂತರ್ಭಾವಿನೋऽಜ್ಞಾನಸ್ಯ ಅಸತ್ವಮಾಪಾದ್ಯತ ಇತಿ ಚೇತ್,**

ಇಲ್ಲಿ ನೀವು ಹೀಗೆ ಅನುಮಾನವನ್ನು ಪ್ರಯೋಗ ಮಾಡಬಹುದು –

ಪ್ರಮೇಯತ್ವಂ ಸಾಶ್ರಯನಿರಾಶ್ರಯಾನ್ಯತರಮಾತ್ರನಿಷ್ಠಂ ಧರ್ಮತ್ವಾತ್ ಘಟತ್ವವತ್ - ಪ್ರಮೇಯತ್ವವು ಧರ್ಮವಾದ್ದರಿಂದ ಸಾಶ್ರಯಪದಾರ್ಥದಲ್ಲಿ ಹಾಗೂ ನಿರಾಶ್ರಯಪದಾರ್ಥದಲ್ಲಿ ಮಾತ್ರ ಇರುತ್ತದೆ, ಘಟತ್ವದಂತೆ. ಅಥವಾ

ಪ್ರಮೇಯತ್ವಂ ಸವಿಷಯನಿರ್ವಿಷಯಾನ್ಯತರಮಾತ್ರನಿಷ್ಠಂ ಧರ್ಮತ್ವಾತ್ ಘಟತ್ವವತ್ - ಪ್ರಮೇಯತ್ವವು ಧರ್ಮವಾದ್ದರಿಂದ ಸವಿಷಯಪದಾರ್ಥದಲ್ಲಿ ಅಥವಾ ನಿರ್ವಿಷಯಪದಾರ್ಥದಲ್ಲಿ ಮಾತ್ರ ಇರುತ್ತದೆ, ಘಟತ್ವದಂತೆ.

ಈ ಎರಡು ಅನುಮಾನಗಳಿಂದ ಸಾಶ್ರಯ ಹಾಗೂ ನಿರಾಶ್ರಯ-ಪದಾರ್ಥಗಳಲ್ಲಿ ಸೇರದ ಅಥವಾ ಸವಿಷಯ ಹಾಗೂ ನಿರ್ವಿಷಯ-ಪದಾರ್ಥಗಳಲ್ಲಿ ಸೇರದ ಅಜ್ಞಾನದಲ್ಲಿ ಅಸತ್ವವನ್ನೇ ಒಪ್ಪಿದಂತಾಗುತ್ತದೆ ಎಂದು.

ವಿವರಣೆ – ಅದ್ವೈತಿಗಳು ವ್ಯಾಪಕವಾದ ಆಶ್ರಯ, ವಿಷಯಗಳಿಲ್ಲದ ಕಾರಣ ವ್ಯಾಪ್ಯವಾದ ಅಜ್ಞಾನವೂ ಇಲ್ಲವೆಂಬ ನಮ್ಮ ಮಾತಿಗೆ ಆಕ್ಷೇಪ ಮಾಡುತ್ತಾ ಮಧ್ಯದಲ್ಲಿ ನಮ್ಮ ಅಭಿಪ್ರಾಯ ಹೀಗಿರಬಹುದೆಂದು ಸ್ವತಃ ಅವರೇ ಊಹಿಸಿ-ಕೊಳ್ಳುತ್ತಿದ್ದಾರೆ. ಅವರು ಊಹೆ ಮಾಡುವ ಮಾತುಗಳು ಹೀಗಿವೆ. ಪ್ರಮೇಯತ್ವವು ಸಾಶ್ರಯಪದಾರ್ಥ ನಿರಾಶ್ರಯಪದಾರ್ಥಗಳೆರೆಡರಲ್ಲೇ ಇರು-ತ್ತದೆ. ಅಥವಾ ಸವಿಷಯಪದಾರ್ಥ ನಿರ್ವಿಷಯಪದಾರ್ಥಗಳೆರಡರಲ್ಲೇ ಇರುತ್ತದೆ.

ಅಜ್ಞಾನವು ಸಾಶ್ರಯಪದಾರ್ಥವೂ ಅಲ್ಲ ಅಥವಾ ನಿರಾಶ್ರಯಪದಾರ್ಥವೂ ಅಲ್ಲ. ಆದ್ದರಿಂದ ಅಜ್ಞಾನದಲ್ಲಿ ಪ್ರಮೇಯತ್ವವು ಇಲ್ಲ ಎಂದು ಹೇಳಿದರೆ ಅರ್ಥಾತ್ ಅಸತ್ಯವಾಗಿದೆ ಎಂದು ಹೇಳಿದಂತಾಯಿತು. ಏಕೆಂದರೆ ಎಲ್ಲಿ ಪ್ರಮೇಯತ್ವ-ವಿಲ್ಲವೋ ಅಲ್ಲಿ ಅಸತ್ವವಿರುತ್ತದೆಂಬುದು ಸಿದ್ಧವಾಗಿದೆ. ಆದರಂತೆ ಅಜ್ಞಾನವು ಸವಿಷಯಪದಾರ್ಥವೂ ಅಲ್ಲ ನಿರ್ವಿಷಯಪದಾರ್ಥವೂ ಅಲ್ಲ. ಆದ್ದರಿಂದ ಇದರಲ್ಲಿ ಪ್ರಮೇಯತ್ವವಿಲ್ಲ ಎಂಬುದಾಗಿ ತತ್ವವಾದಿಗಳಾದ ನೀವು ಅನುಮಾನ-ವನ್ನು ಪ್ರಯೋಗ ಮಾಡಬೇಕು. ಆದರೆ ಈ ಅನುಮಾನಪ್ರಯೋಗದಲ್ಲೂ ದೋಷವಿದೆ ಎಂಬುದನ್ನು ಹೀಗೆ ತೋರಿಸುತ್ತಾರೆ –

ಮಂದಾರಮಂಜರೀ–

अत्र वक्तव्यम्, किं मात्रपदव्यावर्त्यमिति । उभयव्यतिरिक्तमिति चेत् तत्किं प्रमितं ? उत न? नाद्यः । प्रमितत्वादेव तत्र प्रमेयत्वसम्भवेन मात्रशब्देन पुनस्तद्व्यावर्तने व्याघातात् । न द्वितीयः । अप्रमित-व्यावृत्त्यर्थं पदप्रयोगानुपपत्तेः । तस्मात् 'व्याप्यस्याज्ञानस्याप्यभावः' इति कथमुक्तम् ? इति चेत्

ಅತ್ರ ವಕ್ತವ್ಯಮ್, ಕಿಂ ಮಾತ್ರಪದವ್ಯಾವರ್ತ್ಯಮ್? ಇತಿ । ಉಭಯ-ವ್ಯತಿರಿಕ್ತಮಿತಿ ಚೇತ್, ತತ್ಕಿಂ ಪ್ರಮಿತಮ್? ಉತ ನ? ನಾದ್ಯಃ। ಪ್ರಮಿತತ್ವಾದೇವ ತತ್ರ ಪ್ರಮೇಯತ್ವಸಂಭವೇನ ಮಾತ್ರಶಬ್ದೇನ ಪುನಸ್ತದ್ವ್ಯಾವರ್ತನೇ ವ್ಯಾಘಾತಾತ್ । ನ ದ್ವಿತೀಯಃ । ಅಪ್ರಮಿತವ್ಯಾವೃತ್ತ್ಯರ್ಥಂ ಪದಪ್ರಯೋಗಾ-ನುಪಪತ್ತೇಃ । ತಸ್ಮಾತ್ 'ವ್ಯಾಪ್ಯಸ್ಯಾಜ್ಞಾನಸ್ಯಾಪ್ಯಭಾವಃ' ಇತಿ ಕಥಮುಕ್ತಮ್? ಇತಿ ಚೇತ್–

ಇಲ್ಲಿ ಉತ್ತರಿಸುತ್ತೇವೆ – ಮಾತ್ರ ಪದದಿಂದ ವ್ಯಾವರ್ತ್ಯವಾದದ್ದು ಯಾವುದು? ಉಭಯವ್ಯತಿರಿಕ್ತವಾದದ್ದು ಎಂದು ಉತ್ತರಿಸಿದರೆ ಅದು ಪ್ರಮಿತವೋ ಅಲ್ಲವೋ? ಪ್ರಮಿತವೆಂದರೆ ಪ್ರಮಿತವಾದ್ದರಿಂದಲೇ ಅದರಲ್ಲೂ

ಪ್ರಮೇಯತ್ವವು ಬರುವಾಗ ಪುನಃ ಮಾತ್ರಶಬ್ದದಿಂದ ಅದನ್ನು ವ್ಯಾವೃತ್ತಿ-ಮಾಡಿದರೆ ಸ್ವವಚನವಿರೋಧವು ಬರುತ್ತದೆ. ಪ್ರಮಿತವಲ್ಲವೆಂದರೆ, ಅಪ್ರಮಿತವಾದದ್ದನ್ನು ವ್ಯಾವರ್ತಮಾಡುವುದಕ್ಕಾಗಿ ಮಾತ್ರಶಬ್ದದ ಪ್ರಯೋಗವು ಅನುಪಪನ್ನವಾಗುತ್ತದೆ. ಈ ಎಲ್ಲಾ ದೋಷಗಳಿರುವುದರಿಂದ ವ್ಯಾಪ್ಯವಾದ ಅಜ್ಞಾನವೂ ಕೂಡ ಅಯುಕ್ತವಾಗುತ್ತದೆಂದು ಟೀಕೆಯಲ್ಲಿ ಹೇಳಿದ್ದು ಹೇಗೆ ಸಮಂಜಸವಾಗುತ್ತದೆ?

ವಿವರಣೆ – ಇಲ್ಲಿಗೆ ಅದ್ವೈತಿಗಳು ಆಕ್ಷೇಪವನ್ನು ಮಾಡಿ ಮುಗಿಸಿದರು. ಮುಂದೆ ತತ್ವವಾದಿಗಳ ಉತ್ತರವನ್ನು ಮಂದಾರಮಂಜರಿಯಲ್ಲಿ 'ಇತ್ಥಂ ಅಭಿಪ್ರೇತ್ಯೋಕ್ತಂ' ಎಂಬಲ್ಲಿಂದ ಪ್ರಾರಂಭಿಸಿ 'ಅಸ್ತು ಇತಿ' ಎಂಬಲ್ಲಿಯವರೆಗೆ ನಿರೂಪಣೆ ಮಾಡಿದ್ದಾರೆ.

## ತತ್ವವಾದಿಗಳ ಸಮಾಧಾನ

ಮಂದಾರಮಂಜರೀ–

इत्थमभिप्रेत्योक्तम् । जगदुपादानं नाज्ञाननिराश्रयत्वात् निर्विषय-त्वादित्यन्वयव्यतिरेकिद्वयेन उभयवादिसिद्धस्य जगदुपादानस्याज्ञानत्व-निषेधात् न त्वदभिमताज्ञानसिद्धिः । नियमेन आश्रयविषयज्ञप्तिसापेक्ष-प्रतीत्यविषयत्वस्य हेतुत्वान्न कश्चिद्दोषः ।

ಇತ್ಥಮಭಿಪ್ರೇತ್ಯ, ಉಕ್ತಮ್ । ಜಗದುಪಾದಾನಂ ನಾಜ್ಞಾನನಿರಾಶ್ರಯ-ತ್ವಾತ್ ನಿರ್ವಿಷಯತ್ವಾತ್ ಇತ್ಯನ್ವಯವ್ಯತಿರೇಕಿದ್ವಯೇನ ಉಭಯವಾದಿಸಿದ್ಧಸ್ಯ ಜಗದುಪಾದಾನಸ್ಯಾಜ್ಞಾನತ್ವನಿಷೇಧಾತ್ ನ ತ್ವದಭಿಮತಾಜ್ಞಾನಸಿದ್ಧಿಃ । ನಿಯಮೇನ ಆಶ್ರಯವಿಷಯಜ್ಞಪ್ತಿಸಾಪೇಕ್ಷಪ್ರತೀತ್ಯವಿಷಯತ್ವಸ್ಯ ಹೇತುತ್ವಾನ್ನ ಕಶ್ಚಿದ್ದೋಷಃ ।

ತತ್ವವಾದಿಗಳ ಅಭಿಪ್ರಾಯ ಹೀಗಿದೆ –

ಜಗತ್ತಿನ ಉಪಾದಾನವು ಅಜ್ಞಾನವಾಗುವುದಿಲ್ಲ ನಿರಾಶ್ರಯವಾಗಿದ್ದರಿಂದ ಹಾಗೂ ನಿರ್ವಿಷಯವಾದ್ದರಿಂದ ಎಂಬುದಾಗಿ ಅನ್ವಯವ್ಯತಿರೇಕಿಗಳಿಂದ ಉಭಯವಾದಿಸಿದ್ಧವಾದ ಜಗದುಪಾದಾನಕ್ಕೆ ಅಜ್ಞಾನತ್ವವನ್ನು ನಿಷೇಧಮಾಡಿರುವುದರಿಂದ ನಿನಗೆ ಅಭಿಮತವಾದ ಅಜ್ಞಾನವು ಸಿದ್ಧವಾಗುವುದಿಲ್ಲ. ನಿಯಮೇನ ಆಶ್ರಯವಿಷಯಜ್ಞಪ್ತಿಸಾಪೇಕ್ಷಪ್ರತೀತ್ಯವಿಷಯತ್ವವನ್ನು ಹೇತುವನ್ನಾಗಿ ವಿವಕ್ಷಿಸಿದಾಗ ಯಾವುದೇ ದೋಷಕ್ಕೆ ಅವಕಾಶವಿಲ್ಲ.

ವಿವರಣೆ – ಅಜ್ಞಾನವು ನಿರಾಶ್ರಿತವಾಗಿದೆ ಹಾಗೂ ನಿರ್ವಿಷಯವಾಗಿದೆ. ಆದ್ದರಿಂದ ಜಗತ್ತಿಗೆ ಉಪಾದಾನಕಾರಣವಾಗಲು ಸಾಧ್ಯವಿಲ್ಲ ಎಂದು ನಾವು ಸಾಧಿಸುತ್ತೇವೆ. ಯಾವುದು ಜಗತ್ತಿಗೆ ಉಪಾದಾನಕಾರಣವೋ ಅದು ಅಜ್ಞಾನವಾಗುವುದಿಲ್ಲವೆಂದು ಅನ್ವಯವ್ಯತಿರೇಕದಿಂದ ಸಾಧನೆ ಮಾಡಿದಾಗ ನಿನಗೆ ಅಭಿಮತವಾದ ಜಗದುಪಾದಾನಕಾರಣೀಭೂತವಾದ ಅಜ್ಞಾನವು ಸಿದ್ಧವಾಗುವುದಿಲ್ಲ ಎಂದು ನಾವು ಅನುಮಾನದ ಮೂಲಕ ಸಾಧಿಸುತ್ತೇವೆ.

ಮಂದಾರಮಂಜರೀ–

यद्वा पररीत्या प्रसक्तं मात्रपदेन व्यावर्त्यत इति पूर्वप्रयोग एवास्त्विति ।

ಯದ್ವಾ ಪರರೀತ್ಯಾ ಪ್ರಸಕ್ತಂ ಮಾತ್ರಪದೇನ ವ್ಯಾವರ್ತ್ಯತ ಇತಿ ಪೂರ್ವಪ್ರಯೋಗ ಏವಾಸ್ತ್ವಿತಿ।

ಅಥವಾ ಅದ್ವೈತಿಗಳ ಪ್ರಕಾರ ಪ್ರಸಕ್ತವಾದದ್ದನ್ನು ಮಾತ್ರಪದದಿಂದ ವ್ಯಾವೃತ್ತಿಮಾಡುತ್ತೇವೆ. ಆದ್ದರಿಂದ ಅದ್ವೈತಿಗಳು ಪ್ರಯೋಗಿಸಿದ ಅನುಮಾನವೇ ನಮಗೆ ವಿವಕ್ಷಿತವೆಂದು ಉತ್ತರಿಸುತ್ತೇವೆ.

ವಿವರಣೆ – ಹಿಂದೆ ಪೂರ್ವಪಕ್ಷವನ್ನು ಮಾಡುವಾಗ ಪ್ರಮೇಯತ್ವಂ ಸಾಶ್ರಯನಿರಾಶ್ರಯಾನ್ಯತರಮಾತ್ರನಿಷ್ಠಂ ಧರ್ಮತ್ವಾತ್ ಘಟತ್ವವತ್ ಎಂಬ ಅನುಮಾನಪ್ರಯೋಗವು ಅಸಾಧುವಾಗಿದೆಯೆಂದು ಆಕ್ಷೇಪ ಮಾಡಿದ್ದನು. ಈ

ಅನುಮಾನವನ್ನೇ ನಾವು ಪ್ರಕೃತ ಆಧಾರವನ್ನಾಗಿ ವಿವಕ್ಷಿಸುತ್ತೇವೆ. ಇಲ್ಲಿರುವ ಮಾತ್ರಪದದಿಂದ ವ್ಯಾವರ್ತ್ಯವಾದದ್ದು ಯಾವುದು ಎಂಬ ಅದ್ವೈತಿಯ ಆಕ್ಷೇಪಕ್ಕೆ "ಅದ್ವೈತಿಯಾದ ನಿನ್ನ ಮತದ ಪ್ರಕಾರ ಯಾವುದು ಪ್ರಸಕ್ತವಾಗಿದೆಯೋ ಅದನ್ನು ವ್ಯಾವರ್ತ್ಯ ಮಾಡುತ್ತೇನೆ" ಎಂದು ವಿವಕ್ಷಿಸಿದಾಗ ಯಾವುದೇ ಆಕ್ಷೇಪಕ್ಕೆ ಅವಕಾಶವಿಲ್ಲ. ಅಂದರೆ ಮಾತ್ರಪದದಿಂದ ವ್ಯಾವರ್ತ್ಯವಾದದ್ದು ಯಾವುದು ಎಂಬ ವಿಕಲ್ಪಕ್ಕೆ ಅವಕಾಶವಿಲ್ಲ.

## ಅದ್ವೈತಿಗಳು ಅಜ್ಞಾನದ ಅಧೀನರು

ಶ್ರೀನಿವಾಸತೀರ್ಥೀಯ –

**शास्त्रस्य** वेदतन्मीमांसाशास्त्रस्य । **अद्वैतवादे** अद्वैतसिद्धान्ते । **अज्ञानसिध्यधीनत्वादिति** । अज्ञो ह्यधिकारी । अज्ञातो हि विषयः। अज्ञाननिवृत्तिः प्रयोजनमित्येवमधिकार्यादिसिद्धेरज्ञानसिध्यधीनत्वादित्यर्थः ।

ಶಾಸ್ತ್ರಸ್ಯ= ವೇದತನ್ಮೀಮಾಂಸಾಶಾಸ್ತ್ರಸ್ಯ। ಅದ್ವೈತವಾದೇ ಅದ್ವೈತಸಿದ್ಧಾಂತೇ। ಅಜ್ಞಾನಸಿದ್ಧ್ಯಧೀನತ್ವಾದಿತಿ ॥ ಅಜ್ಞೋ ಹಿ ಅಧಿಕಾರೀ । ಅಜ್ಞಾತೋ ಹಿ ವಿಷಯಃ । ಅಜ್ಞಾನನಿವೃತ್ತಿಃ ಪ್ರಯೋಜನಮಿತ್ಯೇವಮ್ ಅಧಿಕಾರ್ಯಾದಿಸಿದ್ಧೇರಜ್ಞಾನಸಿದ್ಧ್ಯಧೀನತ್ವಾತ್ ಇತ್ಯರ್ಥಃ।

'ಶಾಸ್ತ್ರಸ್ಯ' ಎಂದರೆ ವೇದ ಹಾಗೂ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಎಂದರ್ಥ. 'ಅದ್ವೈತವಾದೇ' ಎಂದರೆ ಅದ್ವೈತಸಿದ್ಧಾಂತದಲ್ಲಿ ಎಂದರ್ಥ. 'ಅಜ್ಞಾನಸಿದ್ಧ್ಯಧೀನತ್ವಾತ್' ಎಂಬುದರ ಅಭಿಪ್ರಾಯ ಹೀಗಿದೆ – ಅಜ್ಞಾನಿಯು ಅಧಿಕಾರಿಯಾಗುತ್ತಾನೆ. ಅಜ್ಞಾನಕ್ಕೆ ವಿಷಯವಾದ ಐಕ್ಯವು ವಿಷಯವಾಗುತ್ತದೆ. ಅಜ್ಞಾನನಿವೃತ್ತಿಯು ಪ್ರಯೋಜನವಾಗುತ್ತದೆ ಎಂಬುದು ಮಾಯಾವಾದಿಗಳ ಮತ. ಈ ಮತದಲ್ಲಿ ಎಲ್ಲವೂ ಅಜ್ಞಾನದ ಅಧೀನವಾಗಿರುವುದರಿಂದ ಎಂದು ಅಭಿಪ್ರಾಯ.

## ಅಜ್ಞಾನವು ನಿರಾಶ್ರಯವಲ್ಲ

ಶ್ರೀನಿವಾಸತೀರ್ಥೀಯ –

ननु सर्वज्ञस्याज्ञताऽज्ञानाश्रयता न घटत इति चेन्निराश्रयं निर्विषयमेवास्त्वज्ञानमित्यतस्तस्य साश्रयत्वादिनियममाह – **अज्ञानं हीति** । क्वचिद्विषये । अस्यास्मिन्नज्ञानमिति प्रतीतेरिति भावः ।

ನನು ಸರ್ವಜ್ಞಸ್ಯಾಜ್ಞತಾಽಜ್ಞಾನಾಶ್ರಯತಾ ನ ಘಟತ ಇತಿ ಚೇತ್ ನಿರಾಶ್ರಯಂ ನಿರ್ವಿಷಯಮೇವಾಸ್ತು ಅಜ್ಞಾನಮ್ ಇತ್ಯತಸ್ತಸ್ಯ ಸಾಶ್ರಯತ್ವಾದಿನಿಯಮಮಾಹ – ಅಜ್ಞಾನಂ ಹೀತಿ । ಕ್ವಚಿದ್ವಿಷಯೇ । ಅಸ್ಯಾಸ್ಮಿನ್ನಜ್ಞಾನಮಿತಿ ಪ್ರತೀತೇರಿತಿ ಭಾವಃ।

ಸರ್ವಜ್ಞನಾದ ಪರಮಾತ್ಮನಿಗೆ ಅಜ್ಞಾನಾಶ್ರಯತ್ವವು ಕೂಡುವುದಿಲ್ಲವೆಂದು ಹೇಳುವುದಾದರೆ ಅಜ್ಞಾನವು ನಿರಾಶ್ರಯ ಎಂದಂತಾಯಿತು. ಅಜ್ಞಾನವು ನಿರಾಶ್ರಯ ಮತ್ತು ನಿರ್ವಿಷಯವೇ ಆಗಲಿ? ಎಂಬ ಪ್ರಶ್ನೆಗೆ ಅಜ್ಞಾನವು ಸವಿಷಯಕಪದಾರ್ಥವೆಂದು 'ಅಜ್ಞಾನಂ ಹಿ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಕ್ವಚಿತ್' ಎಂದರೆ ಕೆಲವು ವಿಷಯದಲ್ಲಿ ಎಂದರ್ಥ. ಇವನಿಗೆ ಇಂತಹ ವಿಷಯದಲ್ಲಿ ಅಜ್ಞಾನವಿದೆ ಎಂಬ ಪ್ರತೀತಿ ಇರುವುದರಿಂದ ಅಜ್ಞಾನವು ನಿರ್ವಿಷಯಕವೂ ಅಲ್ಲ ನಿರಾಶ್ರಯವೂ ಅಲ್ಲ.

## ಜೀವನಲ್ಲೂ ಅಜ್ಞಾನ ಹೇಳಲಾಗದು

ಶ್ರೀನಿವಾಸತೀರ್ಥೀಯ –

ननु तर्हि जीवस्यैवास्त्वज्ञानं घटादिविषय इत्यत आह – **नच तत्पक्ष इति** । **वस्तु** जीवाख्यम् । कुतः शब्दः कुत्रेत्यर्थे च शब्दोऽप्यर्थ इत्यभिप्रेत्योक्तम् – **कुत्रापीति** । विषय इत्यर्थः ।।

ನನು ತರ್ಹಿ ಜೀವಸ್ಯೈವಾಸ್ತು ಅಜ್ಞಾನಮ್ ಘಟಾದಿವಿಷಯ ಇತ್ಯತ ಆಹ –

**ನಚ ತತ್ಪಕ್ಷ ಇತಿ ॥ ವಸ್ತು = ಜೀವಾಖ್ಯಮ್ । ಕುತಃ ಶಬ್ದಃ 'ಕುತ್ರ' ಇತ್ಯರ್ಥೇ; ಚಶಬ್ದಃ ಅಪ್ಯರ್ಥೇ ಇತ್ಯಭಿಪ್ರೇತ್ಯೋಕ್ತಮ್ – ಕುತ್ರಾಪೀತಿ ॥ 'ವಿಷಯೇ' ಇತ್ಯರ್ಥಃ।**

ಹಾಗಾದರೆ ಪರಮಾತ್ಮನಲ್ಲಿ ಅಜ್ಞಾನವು ಇರುವುದು ಬೇಡ; ಘಟಾದಿವಿಷಯಕವಾಗಿ ಜೀವನಲ್ಲಿ ಅಜ್ಞಾನವನ್ನು ಒಪ್ಪಬಹುದಲ್ಲವೇ? ಎಂಬ ಪ್ರಶ್ನೆಗೆ ''ನಚ ತತ್ಪಕ್ಷೇ'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ''ವಸ್ತು'' ಎಂಬ ಪದಕ್ಕೆ ಜೀವನೆಂದರ್ಥ. ''ಕುತಃ'' ಎಂಬ ಪದವು ಕುತ್ರ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. 'ಚ'ಶಬ್ದವು ಅಪಿ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

ಆದ್ದರಿಂದ 'ಕುತಶ್ಚನ' ಎಂಬುದರ ಪದದ ಅರ್ಥವನ್ನೇ ಕುತ್ರಾಪಿ ಎಂದು ವ್ಯಾಖ್ಯಾನಮಾಡಿದ್ದಾರೆ. ಅಂದರೆ ಯಾವುದೇ ವಿಷಯದಲ್ಲಿ ಎಂದು ಅಭಿಪ್ರಾಯ.

## ವಿದ್ಯಾರ್ಥಿಗಳೇ ಗಮನಿಸಿ

ವ್ಯಾಪ್ತಿಯೆಂದರೆ ಸಾಹಚರ್ಯನಿಯಮ;

ವ್ಯಾಪ್ತಿಗೆ ಕರ್ಮವಾದದ್ದು ವ್ಯಾಪ್ಯ, ವ್ಯಾಪ್ತಿಗೆ ಕರ್ತೃವಾದದ್ದು ವ್ಯಾಪಕ. ಧೂಮಕ್ಕೆ ಅಗ್ನಿಯಿಂದ ಸಾಹಚರ್ಯನಿಯಮರೂಪವಾದ ವ್ಯಾಪ್ತಿಯಿದೆ. ಇಲ್ಲಿ ಧೂಮವು ವ್ಯಾಪ್ಯ ಎನಿಸುತ್ತದೆ. ಅಗ್ನಿಯು ವ್ಯಾಪಕ ಎನಿಸುತ್ತದೆ. ವ್ಯಾಪ್ಯಸ್ಯ ವಚನಂ ಪೂರ್ವಂ ವ್ಯಾಪಕಸ್ಯ ತತಃ ಪರಮ್ ಎಂಬ ಮಾತಿನಂತೆ ವ್ಯಾಪ್ಯವನ್ನು ಮೊದಲು ಹೇಳಬೇಕು. ವ್ಯಾಪಕವನ್ನು ಅನಂತರ ಹೇಳಬೇಕು.

ಹೀಗೆ ಯಾವ ಧರ್ಮಗಳಿಗೆ ವ್ಯಾಪ್ಯ- ವ್ಯಾಪಕಭಾವವಿರುತ್ತದೋ ಅಲ್ಲಿ ಮಾತ್ರ ಸಾಧ್ಯಸಾಧನಭಾವವು ಇರುತ್ತದೆ.

ಪ್ರಕೃತ ಆಶ್ರಯತ್ವ, ವಿಷಯತ್ವಗಳೆಂಬ ವ್ಯಾಪಕಗಳೇ ಇಲ್ಲದ ಕಾರಣ ವ್ಯಾಪ್ಯವಾದ ಅಜ್ಞಾನವೂ ಕೂಡ ಇರಲು ಸಾಧ್ಯವಿಲ್ಲ ಎಂದು ತಿಳಿಯಬೇಕು.

## ಸರ್ವಜ್ಞತ್ವ - ಅಜ್ಞಾನಾಭಾವಗಳಿಗೆ ವ್ಯಾಪ್ತಿಸಮರ್ಥನೆ

ಟೀಕಾ–

**ननु सर्वज्ञस्याज्ञता न घटत इत्यत्र नान्वयदृष्टान्तः । परमात्मना विना अन्यस्य सर्वज्ञस्याभावात् ।**

ನನು 'ಸರ್ವಜ್ಞಸ್ಯ ಅಜ್ಞತಾ ನ ಘಟತೇ' ಇತ್ಯತ್ರ ನಾನ್ವಯ- ದೃಷ್ಟಾಂತಃ। ಪರಮಾತ್ಮನಾ ವಿನಾ ಅನ್ಯಸ್ಯ ಸರ್ವಜ್ಞಸ್ಯಾ- ಭಾವಾತ್।

'ಎಲ್ಲವನ್ನೂ ತಿಳಿದಿರುವ ಬ್ರಹ್ಮನಲ್ಲಿ ಅಜ್ಞಾನವು ಸರ್ವಥಾ ಕೂಡುವುದಿಲ್ಲ' ಎಂಬ ಶ್ರೀಮದಾಚಾರ್ಯರ ಮಾತು ಸರಿಯಲ್ಲ. ಏಕೆಂದರೆ ಅನ್ವಯ-ವ್ಯಾಪ್ತಿಯು ಇಲ್ಲಿ ವಿವಕ್ಷಿತವಾಗಿದೆಯೋ ಅಥವಾ ವ್ಯತಿರೇಕವ್ಯಾಪ್ತಿಯು ವಿವಕ್ಷಿತವಾಗಿದೆಯೋ?. ಅನ್ವಯವ್ಯಾಪ್ತಿಯನ್ನು ಶ್ರೀಮದಾಚಾರ್ಯರು ವಿವಕ್ಷಿಸಿದ್ದಾರೆಂದು ಹೇಳುವುದಾದಲ್ಲಿ ದೃಷ್ಟಾಂತವೇ ಕೂಡುವುದಿಲ್ಲ. 'ಯತ್ರ ಯತ್ರ ಸರ್ವಜ್ಞತ್ವಂ, ತತ್ರ ತತ್ರ ಅಜ್ಞಾನಾಭಾವಃ' 'ಎಲ್ಲಿ ಸರ್ವಜ್ಞತ್ವ-ವಿರುತ್ತದೋ ಅಲ್ಲಿ ಅಜ್ಞಾನವು ಇರುವುದಿಲ್ಲ' ಎಂದು ಹೇಳಬೇಕು. ಈ ವ್ಯಾಪ್ತಿಗೆ ದೃಷ್ಟಾಂತವೇ ಇಲ್ಲ. ಏಕೆಂದರೆ ಪರಮಾತ್ಮನನ್ನು ಬಿಟ್ಟು ಯಾರೂ ಸಹ ಸರ್ವಜ್ಞರು ಆಗಿರುವುದಿಲ್ಲ.

## ವ್ಯತಿರೇಕವ್ಯಾಪ್ತಿಯೂ ಇಲ್ಲ

ಟೀಕಾ–

**नापि व्यतिरेकदृष्टान्तः । अज्ञानाश्रयस्यान्यस्य परेणानभ्युपगमात् । तत् कथमेतत्? इति ।**

ನಾಪಿ ವ್ಯತಿರೇಕದೃಷ್ಟಾಂತಃ। ಅಜ್ಞಾನಾಶ್ರಯಸ್ಯ ಅನ್ಯಸ್ಯ ಪರೇಣ ಅನ-ಭ್ಯುಪಗಮಾತ್। ತತ್ ಕಥಮೇತತ್? ಇತಿ।

ವ್ಯತಿರೇಕದೃಷ್ಟಾಂತವು ವಿವಕ್ಷಿತವಾಗಿದೆಯೆಂದೂ ಹೇಳಲು ಸಾಧ್ಯವಿಲ್ಲ. 'ಯತ್ರ ಅಜ್ಞಾನಾಭಾವಾಭಾವಃ ತತ್ರ ಸರ್ವಜ್ಞತ್ವಾಭಾವಃ' 'ಎಲ್ಲಿ ಅಜ್ಞಾನಾಭಾವವಿರುವುದಿಲ್ಲವೋ ಅಲ್ಲಿ ಸರ್ವಜ್ಞತ್ವವಿರುವುದಿಲ್ಲ' ಎಂಬುದಾಗಿ ವ್ಯತಿರೇಕ-ವ್ಯಾಪ್ತಿಯನ್ನು ಹೇಳಬೇಕು.

ಆದರೆ ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳಲು ಅದ್ವೈತಿಗೆ ಸಾಧ್ಯ-ವಾಗುವುದಿಲ್ಲ. ಏಕೆಂದರೆ ಅಜ್ಞಾನಕ್ಕೆ ಆಶ್ರಯನಾದ ಈಶ್ವರನಿಗಿಂತ ಭಿನ್ನನಾದ ಮತ್ತೊಬ್ಬ ಚೇತನನನ್ನೇ ಅದ್ವೈತಿಯು ಅಂಗೀಕರಿಸಿರುವುದಿಲ್ಲ.

ಆದ್ದರಿಂದ ಸರ್ವಜ್ಞನಿಗೆ ಅಜ್ಞಾನವು ಕೂಡುವುದಿಲ್ಲ ಎಂಬ ಆಚಾರ್ಯರ ಮಾತಿಗೆ ಯಾವ ಅರ್ಥವನ್ನು ವಿವಕ್ಷಿಸಬೇಕು?

## ಸಾಮಾನ್ಯಮುಖೀ ವ್ಯಾಪ್ತಿ ಇದೆ

ಟೀಕಾ–

**मैवम् । 'यो यत्र ज्ञानवान् नासौ तत्राज्ञानवान्' इति सामान्यव्याप्तेरविरोधात् ।**

ಮೈವಮ್ । 'ಯೋ ಯತ್ರ ಜ್ಞಾನವಾನ್ ನಾಸೌ ತತ್ರಾಜ್ಞಾನವಾನ್' ಇತಿ ಸಾಮಾನ್ಯವ್ಯಾಪ್ತೇರವಿರೋಧಾತ್ ।

ಉತ್ತರ – ಅನ್ವಯವ್ಯಾಪ್ತಿಯನ್ನಾಗಲೀ ವ್ಯತಿರೇಕವ್ಯಾಪ್ತಿಯನ್ನಾಗಲೀ ಶ್ರೀಮದಾಚಾರ್ಯರು ವಿವಕ್ಷಿಸಿರುವುದಿಲ್ಲ. 'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್' 'ಯಾರು ಯಾವ ವಿಷಯದಲ್ಲಿ ಜ್ಞಾನವುಳ್ಳವನೋ ಅವನು ಆ ವಿಷಯದಲ್ಲಿ ಅಜ್ಞಾನವುಳ್ಳವನಲ್ಲ' ಎಂಬ ಸಾಮಾನ್ಯವ್ಯಾಪ್ತಿ-ಯನ್ನಷ್ಟೇ ವಿವಕ್ಷಿಸಿದ್ದಾರೆ. ಸಾಮಾನ್ಯವ್ಯಾಪ್ತಿಗೆ ದೃಷ್ಟಾಂತದ ಅಪೇಕ್ಷೆ ಇರು-ವುದಿಲ್ಲ.

## ಮೂರು ಬಗೆಯ ಸಾರ್ವಜ್ಞ್ಯಗಳಲ್ಲಿ ಯಾವುದು?

ಟೀಕಾ–

ननु सर्वं हि यो जानाति स सर्वज्ञः । तिस्रश्चास्य विधाः सम्भवन्ति । प्रमाणतो वा सर्वं जानीयात् भ्रान्त्या वा स्वभावसिद्धया प्रज्ञया वा ।

ನನು ಸರ್ವಂ ಹಿ ಯೋ ಜಾನಾತಿ ಸ ಸರ್ವಜ್ಞಃ । ತಿಸ್ರಶ್ಚಾಸ್ಯ ವಿಧಾಃ ಸಂಭವಂತಿ । ಪ್ರಮಾಣತೋ ವಾ ಸರ್ವಂ ಜಾನೀಯಾತ್ ಭ್ರಾಂತ್ಯಾ ವಾ ಸ್ವಭಾವಸಿದ್ಧಯಾ ಪ್ರಜ್ಞಯಾ ವಾ ।

ಸರ್ವಜ್ಞನೆಂದರೆ 'ಎಲ್ಲಾ ವಸ್ತುಗಳನ್ನು ತಿಳಿದಿರುವವನು' ಎಂದರ್ಥ. ಈ ಸಾರ್ವಜ್ಞ್ಯವನ್ನು ಮೂರು ಪ್ರಕಾರಗಳಲ್ಲಿ ಹೇಳಬಹುದು. (೧) 'ಅಂತಃ-ಕರಣವಿಕಾರರೂಪವಾದ ವೃತ್ತಿಜ್ಞಾನದಿಂದ ಎಲ್ಲವನ್ನೂ ತಿಳಿದಿದ್ದಾನೆ'. (೨) ಭ್ರಾಂತಿಯಿಂದ ಎಲ್ಲವನ್ನೂ ತಿಳಿದಿದ್ದಾನೆ. (೩) ಸ್ವಾಭಾವಿಕವಾದ ಪ್ರಜ್ಞೆಯಿಂದ ಎಲ್ಲವನ್ನೂ ತಿಳಿದಿದ್ದಾನೆ ಎಂದು.

## ವೃತ್ತಿಯಿಂದ ಅಥವಾ ಭ್ರಾಂತಿಯಿಂದ ಸರ್ವಜ್ಞತ್ವ ಒಪ್ಪಿದರೆ ಅಜ್ಞಾನ ಅನಿವಾರ್ಯ

ಟೀಕಾ–

न चैता विधा विना अज्ञानेनोपपद्यन्ते । कूटस्थस्य अज्ञानादृते प्रमातृत्वायोगात् । भ्रान्तेश्च अज्ञानकार्यत्वात् ।

ನ ಚೈತಾ ವಿಧಾ ವಿನಾ ಅಜ್ಞಾನೇನೋಪಪದ್ಯಂತೇ । ಕೂಟಸ್ಥಸ್ಯ ಅಜ್ಞಾನಾ-ದೃತೇ ಪ್ರಮಾತೃತ್ವಾಯೋಗಾತ್ । ಭ್ರಾಂತೇಶ್ಚ ಅಜ್ಞಾನಕಾರ್ಯತ್ವಾತ್ ।

ಈ ಮೂರು ಪ್ರಕಾರಗಳೂ ಕೂಡ ಅಜ್ಞಾನವಿಲ್ಲದೇ ಯುಕ್ತವಾಗುವುದಿಲ್ಲ. ಏಕೆಂದರೆ ಅಂತಃಕರಣವೃತ್ತಿಯಿಂದ ಎಲ್ಲವನ್ನೂ ತಿಳಿಯುತ್ತಾನೆ ಎಂದು ಹೇಳಿದಾಗ ಬ್ರಹ್ಮನು ಪ್ರಮಾತೃ ಎಂದೆನಿಸುತ್ತಾನೆ. ಪ್ರಮಾತೃತ್ವ ಎಂಬ ಧರ್ಮವು ಬ್ರಹ್ಮನಲ್ಲಿ ಬರಬೇಕೆಂದರೆ ಅಜ್ಞಾನವನ್ನು ಒಪ್ಪಲೇಬೇಕು. ಏಕೆಂದರೆ ಬ್ರಹ್ಮನು ನಿರ್ವಿಕಾರನಾಗಿದ್ದಾನೆ. ಇಂತಹ ನಿರ್ವಿಕಾರನಾದ ಬ್ರಹ್ಮನಲ್ಲಿ ಯಾವುದೇ ಧರ್ಮವನ್ನು ಹೇಳಬೇಕೆಂದರೂ ಅಜ್ಞಾನವನ್ನು ಒಪ್ಪಲೇಬೇಕಾಗುತ್ತದೆ.

ಭ್ರಾಂತಿಯಿಂದ ಎಲ್ಲವನ್ನೂ ತಿಳಿಯುತ್ತಾನೆಂಬ ಎರಡನೇ ಪಕ್ಷ ಒಪ್ಪಿದರೂ ಅಜ್ಞಾನ ಅತ್ಯಂತ ಅನಿವಾರ್ಯ. ಏಕೆಂದರೆ, ಭ್ರಾಂತಿಯು ಅಜ್ಞಾನಕಾರ್ಯವಾಗಿರುವುದರಿಂದ ಅಜ್ಞಾನವು ಬ್ರಹ್ಮನಲ್ಲಿದ್ದರೆ ಮಾತ್ರ ಭ್ರಾಂತಿಯಿಂದ ಸಾರ್ವಜ್ಞ್ಯವನ್ನು ಹೇಳಬಹುದು.

**ಸ್ವರೂಪಪ್ರಜ್ಞೆಯಿಂದ ಎಂದರೂ ಅಜ್ಞಾನ ಅನಿವಾರ್ಯ**

**ಟೀಕಾ—**

**स्वरूपप्रज्ञायाश्च नान्तरेणाज्ञानमशेषार्थसङ्गतिः । असङ्गत्वात् 'असङ्गो ह्ययं पुरुषः' इति श्रुतेः । अतः सर्वज्ञताप्यज्ञानवत्तामाक्षिपत्येव परमात्मनो, न प्रतिक्षिपतीति ।**

ಸ್ವರೂಪಪ್ರಜ್ಞಾಯಾಶ್ಚ ನಾಂತರೇಣ ಅಜ್ಞಾನಮಶೇಷಾರ್ಥಸಂಗತಿಃ । ಅಸಂಗತ್ವಾತ್, 'ಅಸಂಗೋ ಹ್ಯಯಂ ಪುರುಷಃ' ಇತಿ ಶ್ರುತೇಃ । ಅತಃ ಸರ್ವಜ್ಞತಾಪಿ ಅಜ್ಞಾನವತ್ತಾಮಾಕ್ಷಿಪತ್ಯೇವ ಪರಮಾತ್ಮನೋ, ನ ಪ್ರತಿಕ್ಷಿಪತೀತಿ ।

ಸ್ವಾಭಾವಿಕವಾದ ಪ್ರಜ್ಞೆಯಿಂದ ಎಲ್ಲವನ್ನೂ ತಿಳಿಯುತ್ತಾನೆಂದು ಮೂರನೇ ಪಕ್ಷದಲ್ಲಿಯೂ ಅಜ್ಞಾನವನ್ನು ಬ್ರಹ್ಮನಲ್ಲಿ ಒಪ್ಪಲೇ ಬೇಕಾಗುತ್ತದೆ.

ಏಕೆಂದರೆ 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯು ಬ್ರಹ್ಮನು ಅಸಂಗನಾಗಿರುತ್ತಾನೆ ಎನ್ನುತ್ತಿದೆ. ಯಾವುದೇ ಪದಾರ್ಥಗಳ ಸಂಬಂಧವಿಲ್ಲದ ಬ್ರಹ್ಮನಿಗೆ ಎಲ್ಲಾ ಪದಾರ್ಥಗಳ ವಿಷಯಕವಾದ ಜ್ಞಾನವು ಬರಬೇಕೆಂದರೆ ಅಜ್ಞಾನವನ್ನು ಒಪ್ಪಲೇಬೇಕು. ಅಜ್ಞಾನವನ್ನು ಒಪ್ಪಿದರೆ ಮಾತ್ರ ಸಂಬಂಧವನ್ನು ಹೇಳಲು ಸಾಧ್ಯ. ಹೀಗೆ ಬ್ರಹ್ಮನಲ್ಲಿ ಮೂರು ಬಗೆಯ ಸಾರ್ವಜ್ಞ್ಯಗಳು ಅಜ್ಞಾನದ ಇರುವಿಕೆಯನ್ನು ಸಮರ್ಥನೆ ಮಾಡುತ್ತಿವೆ ಹೊರತು ವಿರೋಧ ಮಾಡುತ್ತಿಲ್ಲ. ಆದ್ದರಿಂದ ಸರ್ವಜ್ಞತ್ವವಿದ್ದರೆ ಅಜ್ಞಾನವು ಕೂಡುವುದಿಲ್ಲ ಎಂಬ ಆಚಾರ್ಯರ ಮಾತಿಗೆ ಏನರ್ಥ?

## ಸ್ವರೂಪತಃ ಸರ್ವಜ್ಞನೆಂದು ಅದ್ವೈತಿಗಳಿಗೆ ಉತ್ತರ

ಟೀಕಾ–

**मैवम्, मा भूत् प्रमाणेन मा च भूत् भ्रान्त्या, स्वरूपज्ञानेनैव परमात्मनः सर्वज्ञताङ्गीकारात् ।**

ಮೈವಮ್, ಮಾಭೂತ್ ಪ್ರಮಾಣೇನ ಮಾ ಚ ಭೂತ್ ಭ್ರಾಂತ್ಯಾ, ಸ್ವರೂಪಜ್ಞಾನೇನೈವ ಪರಮಾತ್ಮನಃ ಸರ್ವಜ್ಞತಾಂಗೀಕಾರಾತ್ ।

ಅಂತಃಕರಣವೃತ್ತಿಯಿಂದ ಬ್ರಹ್ಮನು ಎಲ್ಲವನ್ನೂ ತಿಳಿಯುತ್ತಾನೆಂದು, ಅಥವಾ ಭ್ರಾಂತಿಯಿಂದ ಎಲ್ಲವನ್ನೂ ತಿಳಿಯುತ್ತಾನೆಂದು ನಾವು ಹೇಳುವು- ದಿಲ್ಲ. ಸ್ವಾಭಾವಿಕವಾದ ಪ್ರಜ್ಞೆಯಿಂದಲೇ ಬ್ರಹ್ಮನೂ ಎಲ್ಲವನ್ನೂ ತಿಳಿಯು- ತ್ತಾನೆಂದು ಹೇಳುತ್ತೇವೆ. ಆದ್ದರಿಂದಲೇ ಸರ್ವಜ್ಞನೆನಿಸಿದ್ದಾನೆ.

## ಸಂಬಂಧಕ್ಕೆ ಅಜ್ಞಾನ ಬೇಡ

ಟೀಕಾ–

**असङ्गत्वं तु तत्कृतफललेपाभावमात्रम् । न च सम्बन्ध- विरह एव ।**

ಅಸಂಗತ್ವಂ ತು ತತ್ಕೃತಫಲಲೇಪಾಭಾವಮಾತ್ರಮ್ । ನಚ ಸಂಬಂಧ-ವಿರಹ ಏವ ।

ಅಸಂಗನಾದ ಬ್ರಹ್ಮನಿಗೆ ಸರ್ವಜ್ಞತ್ವವನ್ನು ಹೇಳಬೇಕೆಂದರೆ ಸಂಬಂಧಕ್ಕಾಗಿ ಅಜ್ಞಾನವನ್ನು ಒಪ್ಪಲೇಬೇಕಲ್ಲವೇ? ಎಂದು ಪ್ರಶ್ನಿಸಬಾರದು. 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯು ಕೇವಲ ಆಯಾ ಪದಾರ್ಥಗಳ ಫಲಲೇಪವಿಲ್ಲ ಎಂಬರ್ಥವನ್ನು ಹೊಂದಿರುತ್ತದೆ; ಸಂಬಂಧವೇ ಇಲ್ಲವೆಂಬ ತಾತ್ಪರ್ಯವನ್ನು ಹೊಂದಿರುವುದಿಲ್ಲ.

### ಅಸಂಗೋ ಹ್ಯಯಂ ಪುರುಷಃ

ಟೀಕಾ–

'यथाऽऽकाशस्थितो नित्यं वायुः' इत्यादितथाविध-दृष्टान्तोपादनात् । तदिदमुक्तम् 'अखिलसंवेत्तुः' इति ।

'ಯಥಾऽಕಾಶಸ್ಥಿತೋ ನಿತ್ಯಂ ವಾಯುಃ' ಇತ್ಯಾದಿ ತಥಾವಿಧ-ದೃಷ್ಟಾಂತೋಪಾದಾನಾತ್ । ತದಿದಮುಕ್ತಮ್ 'ಅಖಿಲಸಂವೇತ್ತುಃ' ಇತಿ ।

'ಯಥಾऽಕಾಶಸ್ಥಿತೋ ನಿತ್ಯಂ ವಾಯುಃ' 'ಯಾವ ರೀತಿಯಾಗಿ ಎಲ್ಲೆಡೆ ವ್ಯಾಪಿಸಿರುವ ವಾಯು ಎಲ್ಲ ಪದಾರ್ಥಗಳ ಸಂಬಂಧವನ್ನು ಹೊಂದಿದ್ದರೂ ಆಯಾ ಪದಾರ್ಥಗಳ ದೋಷದ ಲೇಪಕ್ಕೆ ಆಶ್ರಯವಾಗುವುದಿಲ್ಲವೋ, ಅದೇ ರೀತಿ ಪರಮಾತ್ಮನೂ ಕೂಡ ಎಲ್ಲಾ ಪದಾರ್ಥಗಳ ಸಂಬಂಧವನ್ನು ಹೊಂದಿ-ದ್ದರೂ ಕೂಡ ಯಾವುದೇ ದೋಷದ ಫಲಲೇಪವನ್ನು ಹೊಂದಲಾರನು. 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯೇ ಮುಂದೆ ವಾಯುವಿನ ದೃಷ್ಟಾಂತವನ್ನು ನೀಡಿದ್ದರಿಂದ ತತ್ಕೃತಫಲಲೇಪವಿಲ್ಲ ಎಂದೇ ವ್ಯಾಖ್ಯಾನ ಮಾಡಬೇಕು.

## 'ಸಮ್' ಉಪಸರ್ಗ ಹಾಗೂ 'ತೃನ್' ಪ್ರತ್ಯಯಗಳಿಂದಲೇ ಅದ್ವೈತಿಗಳ ನಿರಾಕರಣೆ

ಟೀಕಾ–

अत्र 'सम्' इत्युपसर्गेण भ्रान्त्या सर्वज्ञतां वारयति, ताच्छीलकतृन्प्रत्ययेन प्रमाणजन्यतामिति स्वभाव-ज्ञानेनैवोक्ता भवति ।

ಅತ್ರ 'ಸಮ್' ಇತ್ಯುಪಸರ್ಗೇಣ ಭ್ರಾಂತ್ಯಾ ಸರ್ವಜ್ಞತಾಂ ವಾರಯತಿ, ತಾಚ್ಛೀಲಕತೃನ್‌ಪ್ರತ್ಯಯೇನ ಪ್ರಮಾಣಜನ್ಯತಾಮ್ ಇತಿ ಸ್ವಭಾವ-ಜ್ಞಾನೇನೈವೋಕ್ತಾ ಭವತಿ ।

ಇದನ್ನೇ ಶ್ರೀಮದಾಚಾರ್ಯರು 'ಅಖಿಲಸಂವೇತ್ತುಃ' ಎಂಬುದರಿಂದ ತಿಳಿಸಿದ್ದಾರೆ. ಎಲ್ಲವನ್ನೂ ತಿಳಿದವನಲ್ಲಿ ಅಜ್ಞಾನವು ಕೂಡುವುದಿಲ್ಲ ಎಂದಷ್ಟೇ ಹೇಳಬಹುದಿತ್ತು. ಆದರೆ ಎಲ್ಲವನ್ನೂ ಚೆನ್ನಾಗಿ ಬಲ್ಲವನಲ್ಲಿ ಅಜ್ಞಾನ ಕೂಡುವುದಿಲ್ಲ ಎಂದು ಹೇಳಿದ್ದರಿಂದ ಪರಮಾತ್ಮನ ಜ್ಞಾನವು ಸ್ವಾಭಾವಿಕ-ವಾದದ್ದು ಎಂದು ತಿಳಿಸಿದಂತಾಯಿತು. 'ಸಮ್' ಎಂಬ ಉಪಸರ್ಗದಿಂದ ಪರಮಾತ್ಮನ ಸಾರ್ವಜ್ಞ್ಯವು ಭ್ರಾಂತಿಮೂಲಕವಲ್ಲವೆಂದು ತಿಳಿಸಿದ್ದಾರೆ. 'ಸಂವೇತ್ತುಃ' ಎಂಬಲ್ಲಿರುವ ತೃನ್ ಪ್ರತ್ಯಯದಿಂದ ಸ್ವಾಭಾವಿಕವಾದ ಜ್ಞಾನವೇ ಆಗಿದೆಯೆಂದು ತಿಳಿಸಿದ್ದಾರೆ. ಏಕೆಂದರೆ 'ಆಕ್ವೇಸ್ತಚ್ಛೀಲತದ್ಧರ್ಮತತ್ಸಾಧು-ಕಾರಿಷು' ಎಂಬ ಸೂತ್ರವು ಸ್ವಭಾವ ಎಂಬರ್ಥದಲ್ಲಿ ತೃನ್ ಪ್ರತ್ಯಯವನ್ನು ವಿಧಿಸಿದೆ. ಪರಮಾತ್ಮನ ಜ್ಞಾನವು ಸ್ವಭಾವಭೂತವಾಗಿದೆಯೆಂದು ಹೇಳುವು-ದರಿಂದ ಅಂತಃಕರಣವೃತ್ತಿಯಿಂದ ಬಂದಿರುವುದಿಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಹೀಗೆ ಶ್ರೀಮದಾಚಾರ್ಯರು 'ಅಖಿಲಸಂವೇತ್ತುಃ' ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಪ್ರಶ್ನೆಗೆ ಉತ್ತರಿಸಿದಂತಾಯಿತು.

**ಟೀಕೆಯ ಅರ್ಥ –**

ನನು = ಆಕ್ಷೇಪ, ಸರ್ವಜ್ಞಸ್ಯ = ಸರ್ವಜ್ಞನಾದ ವ್ಯಕ್ತಿಯಲ್ಲಿ, ಅಜ್ಞತಾ = ಅಜ್ಞಾನದ ಇರುವಿಕೆಯು, ನ ಘಟತೇ = ಸರ್ವಥಾ ಕೂಡುವುದಿಲ್ಲ , ಇತ್ಯತ್ರ = ಈ ವಿಷಯದಲ್ಲಿ, ಅನ್ವಯದೃಷ್ಟಾಂತಃ = ಅನ್ವಯದೃಷ್ಟಾಂತವು, ನ = ಇರುವುದಿಲ್ಲ. ಏಕೆಂದರೆ, ಪರಮಾತ್ಮನಾ = ಪರಮಾತ್ಮನ, ವಿನಾ = ಹೊರತಾಗಿ, ಅನ್ಯಸ್ಯ = ಮತ್ತೊಂದು ಪದಾರ್ಥವು, ಸರ್ವಜ್ಞಸ್ಯ = ಸರ್ವಜ್ಞವಾಗಿರುವುದು, ಅಭಾವಾತ್ = ಇಲ್ಲದ ಕಾರಣದಿಂದ, ವ್ಯತಿರೇಕದೃಷ್ಟಾಂತಃ ಅಪಿ = ವ್ಯತಿರೇಕದೃಷ್ಟಾಂತವೂ ಕೂಡ, ನ = ಇರುವುದಿಲ್ಲ. ಅನ್ಯಸ್ಯ = ಪರಮಾತ್ಮನ ಹೊರತಾಗಿ, ಅಜ್ಞಾನಾಶ್ರಯಸ್ಯ = ಅಜ್ಞಾನಕ್ಕೆ ಆಶ್ರಯವಾದ ಮತ್ತೊಂದು ಪದಾರ್ಥವನ್ನು, ಪರೇಣ = ಅದ್ವೈತಿಯಿಂದ, ಅನಭ್ಯುಪಗಮಾತ್ = ಅಂಗೀಕರಿಸದ ಕಾರಣ, ತತ್ = ಹೀಗೆ ದೃಷ್ಟಾಂತ-ವಿಲ್ಲದ ಕಾರಣ, ಏತತ್ = ಈ ವ್ಯಾಪ್ತಿಯು, ಕಥಂ = ಹೇಗೆ ಕೂಡುತ್ತದೆ? ಇತಿ = ಇಷ್ಟು ಆಕ್ಷೇಪ.

ಮೈವಮ್ = ಇದು ಸರಿಯಲ್ಲ, ಯಃ = ಯಾವ ವ್ಯಕ್ತಿಯು, ಯತ್ರ = ಯಾವ ವಿಷಯದಲ್ಲಿ, ಜ್ಞಾನವಾನ್ = ಜ್ಞಾನವುಳ್ಳವನೋ, ಅಸೌ = ಆ ವ್ಯಕ್ತಿಯು, ತತ್ರ = ಅದೇ ವಿಷಯದಲ್ಲಿ, ಅಜ್ಞಾನವಾನ್ ನ = ಅಜ್ಞಾನಿಯೂ ಆಗಲಾರನು, ಇತಿ = ಹೀಗೆ, ಸಾಮಾನ್ಯ-ವ್ಯಾಪ್ತಿಃ = ಸಾಮಾನ್ಯವ್ಯಾಪ್ತಿ ಇರುವುದರಿಂದ, ಅವಿರೋಧಾತ್ = ದೃಷ್ಟಾಂತವಿಲ್ಲವೆಂಬ ವಿರೋಧಕ್ಕೆ ಅವಕಾಶವಿಲ್ಲ.

ನನು = ಆಕ್ಷೇಪ, ಯಃ = ಯಾವ ವ್ಯಕ್ತಿಯು, ಸರ್ವಂ ಹಿ = ಸಕಲಪದಾರ್ಥ-ಗಳನ್ನೂ, ಜಾನಾತಿ = ತಿಳಿಯುತ್ತಾನೋ, ಸಃ = ಅಂತಹ ವ್ಯಕ್ತಿಯೇ, ಸರ್ವಜ್ಞಃ = ಸರ್ವಜ್ಞನೆನಿಸುತ್ತಾನೆ. ಅಸ್ಯ ವಿಧಾಃ = ಈ ಸಾರ್ವಜ್ಞ್ಯದ ಪ್ರಕಾರಗಳು, ತಿಸ್ರಶ್ಚ = ಮೂರು ಬಗೆಯಾಗಿ, ಸಂಭವಂತಿ = ಯುಕ್ತವಾಗುತ್ತವೆ. ಅದು ಹೀಗೆ – ಪ್ರಮಾಣತಃ = ಪ್ರಮಾಣ-ದಿಂದ, ಸರ್ವಂ = ಎಲ್ಲಾ ಪದಾರ್ಥಗಳನ್ನೂ, ಜಾನೀಯಾತ್ = ತಿಳಿಯಬೇಕು. ವಾ = ಅಥವಾ, ಭ್ರಾಂತ್ಯಾ = ಭ್ರಾಂತಿಯಿಂದ ಎಲ್ಲಾ ಪದಾರ್ಥಗಳನ್ನೂ ತಿಳಿಯಬೇಕು. ವಾ = ಅಥವಾ, ಸ್ವಭಾವಸಿದ್ಧ್ಯಾ = ಸ್ವಾಭಾವಿಕವಾದ, ಪ್ರಜ್ಞಯಾ = ಜ್ಞಾನದಿಂದ ಎಲ್ಲವನ್ನೂ ತಿಳಿಯಬೇಕು.

ಏತಾಃ ವಿಧಾಃ = ಈ ಮೂರು ಬಗೆಯ ಸರ್ವಜ್ಞತ್ವಗಳು, ಅಜ್ಞಾನೇನ ವಿನಾ = ಅಜ್ಞಾನವನ್ನು ಬಿಟ್ಟು, ನ ಉಪಪದ್ಯಂತೇ = ಕೂಡುವುದಿಲ್ಲ. ಕೂಟಸ್ಥಸ್ಯ = ನಿರ್ವಿಕಾರನಾದ

ಪರಮಾತ್ಮನಿಗೆ, ಅಜ್ಞಾನಾತ್ ಋತೇ = ಅಜ್ಞಾನವನ್ನು ಬಿಟ್ಟು, ಪ್ರಮಾತೃತ್ವಾಯೋಗಾತ್ = ಪ್ರಮಾತೃತ್ವವು ಕೂಡುವುದಿಲ್ಲ. ಆದ್ದರಿಂದ ಪ್ರಥಮಪಕ್ಷವನ್ನು ಒಪ್ಪಿ, ಸಾರ್ವಜ್ಞ್ಯವನ್ನು ಪ್ರತಿಪಾದಿಸಲಾಗದು. ಭ್ರಾಂತೇಶ್ಚ = ಭ್ರಾಂತಿಯಾದರೋ, ಅಜ್ಞಾನಕಾರ್ಯತ್ವಾತ್ = ಅಜ್ಞಾನದ ಕಾರ್ಯವಾದ್ದರಿಂದ ಸಾರ್ವಜ್ಞ್ಯವನ್ನು ಹೇಳಲಾಗದು. ಸ್ವರೂಪಪ್ರಜ್ಞಾಯಾಶ್ಚ = ಸ್ವರೂಪಸಿದ್ಧವಾದ ಪ್ರಜ್ಞೆಯೂ ಸಹ, ಅಜ್ಞಾನಂ ಅಂತರೇಣ = ಅಜ್ಞಾನವನ್ನು ಬಿಟ್ಟು, ನ ಅಶೇಷಾರ್ಥಸಂಗತಿಃ = ಎಲ್ಲಾ ಅರ್ಥಗಳನ್ನು ವಿಷಯೀಕರಿಸುವುದಿಲ್ಲ. ಏಕೆಂದರೆ, ಅಸಂಗೋ ಹ್ಯಯಂ ಪುರುಷಃ = ಪರಮಾತ್ಮನು ಅಸಂಗನಾಗಿದ್ದಾನೆ, ಇತಿ ಶ್ರುತೇಃ = ಎಂಬ ಶ್ರುತಿಪ್ರಮಾಣವಿರುವುದರಿಂದ, ಅಸಂಗತ್ವಾತ್ = ಪರಮಾತ್ಮನು ಅಸಂಗನಾಗಿರುತ್ತಾನೆ, ಅತಃ = ಆದ್ದರಿಂದ, ಸರ್ವಜ್ಞತಾಪಿ = ಪರಮಾತ್ಮನಲ್ಲಿ ನೀವು ಒಪ್ಪುತ್ತಿರುವ ಸರ್ವಜ್ಞತ್ವವೂ ಕೂಡ, ಪರಮಾತ್ಮನಃ = ಪರಮಾತ್ಮನಿಗೆ, ಅಜ್ಞಾನವತ್ತಾಂ = ಅಜ್ಞಾನದ ಇರುವಿಕೆಯನ್ನು, ಆಕ್ಷಿಪತ್ಯೇವ = ಆಕ್ಷೇಪಿಸುತ್ತದಷ್ಟೇ, ನ ಪ್ರತಿಕ್ಷಿಪತಿ = ಪ್ರತಿಕ್ಷೇಪ ಮಾಡುವುದಿಲ್ಲ; ಇತಿ = ಇಷ್ಟು ಆಕ್ಷೇಪ.

ಮೈವಮ್ = ಇದು ಸರಿಯಲ್ಲ. ಪ್ರಮಾಣೇನ = ಪ್ರಮಾಣದಿಂದ ಸಿದ್ಧವಾಗುವ ಸಾರ್ವಜ್ಞ್ಯವು, ಮಾ ಭೂತ್ = ಬೇಡ, ಭ್ರಾಂತ್ಯಾ = ಭ್ರಾಂತಿಯಿಂದ ಸಿದ್ಧವಾಗುವ ಸಾರ್ವಜ್ಞ್ಯವೂ ಕೂಡ, ಮಾಚ ಭೂತ್ = ಬೇಡವೇ ಬೇಡ. ಸ್ವರೂಪಜ್ಞಾನೇನೈವ = ಸ್ವರೂಪಜ್ಞಾನದಿಂದಲೇನೇ, ಆತ್ಮನಃ = ಪರಮಾತ್ಮನಿಗೆ, ಸರ್ವಜ್ಞತಾಂಗೀಕಾರಾತ್ = ಸರ್ವಜ್ಞತ್ವವನ್ನು ನಾವು ಅಂಗೀಕರಿಸಿರುವುದರಿಂದ, ಅಸಂಗತ್ವಂ ತು = ಪರಮಾತ್ಮನಿಗೆ ಹೇಳಲ್ಪಟ್ಟ ಅಸಂಗವಾದರೂ, ತತ್ಕೃತಫಲಲೇಪಾಭಾವಮಾತ್ರಮ್ = ಆಯಾ ಪದಾರ್ಥಗಳ ಸಂಪರ್ಕದಿಂದ ಯಾವುದೇ ಲೇಪಗಳುಂಟಾಗುವುದಿಲ್ಲವೆಂಬ ದೃಷ್ಟಿಯಿಂದ ಮಾತ್ರ. ನ ಚ ಸಂಬಂಧವಿರಹ ಏವ = ಹೊರತಾಗಿ ಸಂಬಂಧವೇ ಇಲ್ಲವೆಂಬ ದೃಷ್ಟಿಯಿಂದ ಹೇಳಿರುವುದಲ್ಲ.

ಏಕೆಂದರೆ, ಯಥಾಕಾಶಸ್ಥಿತೋ ವಾಯುಃ = ಯಾವ ರೀತಿಯಾಗಿ ಆಕಾಶದಲ್ಲಿರುವ ವಾಯುವು ಇತ್ಯಾದಿಯಾಗಿ ದೃಷ್ಟಾಂತವನ್ನು ನೀಡಿರುವುದರಿಂದ, ತದಿದಮುಕ್ತಮ್ = ಇದೇ ವಿಷಯವನ್ನು ಶ್ರೀಮದಾಚಾರ್ಯರು, ಅಖಿಲಸಂವೇತ್ತುಃ ಎಂಬ ಪದದಿಂದ, ಉಕ್ತಂ = ಹೇಳಿರುತ್ತಾರೆ. ಅತ್ರ = ಈ ವಿಶೇಷಣದಲ್ಲಿರುವ, ಸಮ್ ಇತಿ = ಸಮ್ ಎಂಬ, ಉಪಸರ್ಗೇಣ = ಉಪಸರ್ಗದಿಂದ, ಭ್ರಾಂತ್ಯಾ = ಭ್ರಾಂತಿಮೂಲಕವಾದ, ಸರ್ವಜ್ಞತಾ = ಸರ್ವಜ್ಞತ್ವವನ್ನು, ವಾರಯತಿ = ನಿರಾಕರಿಸಿದ್ದಾರೆ. ತಾಚ್ಛೀಲಿಕತೃನ್‌ಪ್ರತ್ಯಯೇನ = ಅವನ ಸ್ವಭಾವ

ಎಂಬರ್ಥದಲ್ಲಿ ಬರುವಂತಹ ತೃನ್ ಪ್ರತ್ಯಯದಿಂದ, ಪ್ರಮಾಣಜನ್ಯತಾಂ = ಪ್ರಮಾಣದಿಂದ ಹುಟ್ಟುವಿಕೆಯನ್ನು, ಸ್ವಭಾವಜ್ಞಾನೇನೈವ = ಸ್ವಾಭಾವಿಕವಾದ ಜ್ಞಾನದಿಂದಲೇನೇ, ಉಕ್ತಾ ಭವತಿ = ಹೇಳಿದಂತಾಗುತ್ತದೆ.

## ಆಚಾರ್ಯರ ಮಾತು ಹೇಗೆ ಸರಿ? ಆಕ್ಷೇಪ

ಮಂದಾರಮಂಜರೀ–

शङ्कते – **नन्विति** ।। विमतः कदाऽपि किञ्चिद्विषयकाज्ञानवान्न भवति सदा सर्वज्ञत्वात् यो यदा यत्र ज्ञानवान् नासौ तदा तत्राज्ञानवान् यथोभयसम्मतः ।

**ಶಂಕತೇ – ನನ್ವಿತಿ ॥ ವಿಮತಃ ಕದಾಽಪಿ ಕಿಂಚಿದ್ವಿಷಯಕಾಜ್ಞಾನವಾನ್ನ ಭವತಿ ಸದಾ ಸರ್ವಜ್ಞತ್ವಾತ್ ಯೋ ಯದಾ ಯತ್ರ ಜ್ಞಾನವಾನ್ ನಾಸೌ ತದಾ ತತ್ರಾ-ಜ್ಞಾನವಾನ್ ಯಥೋಭಯಸಮ್ಮತಃ।**

'ಅಜ್ಞತಾಖಿಲಸಂವೇತ್ತುಃ ಘಟತೇ ನ ಕುತಶ್ಚನ' 'ಸರ್ವಜ್ಞನಾದ ಪರ-ಮಾತ್ಮನಲ್ಲಿ ಅಜ್ಞಾನವು ಯಾವ ರೀತಿಯಲ್ಲೂ ಕೂಡುವುದಿಲ್ಲ' ಎಂಬ ಶ್ರೀಮದಾಚಾರ್ಯರ ವಾಕ್ಯವನ್ನು 'ನನು' ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಿ-ದ್ದಾನೆ.

## ಸಾಮಾನ್ಯವ್ಯಾಪ್ತಿಯ ಬಗ್ಗೆ ವಿವರಣೆ

'ವಿಮತಃ ಕದಾಽಪಿ ಕಿಂಚಿದ್ವಿಷಯಕಾಜ್ಞಾನವಾನ್ನ ಭವತಿ ಸದಾ ಸರ್ವಜ್ಞತ್ವಾತ್ ಯೋ ಯದಾ ಯತ್ರ ಜ್ಞಾನವಾನ್ ನಾಸೌ ತದಾ ತತ್ರಾ-ಜ್ಞಾನವಾನ್ ಯಥೋಭಯಸಮ್ಮತಃ' ದೇವದತ್ತನಿಗೆ ಯಾವ ಕಾಲದಲ್ಲಿ ಘಟದ ಬಗ್ಗೆ ಜ್ಞಾನವಿರುತ್ತದೋ ಅದೇ ದೇವದತ್ತನಿಗೆ ಆ ಕಾಲದಲ್ಲೇ ಅಜ್ಞಾನವಿರಲು ಸಾಧ್ಯವಿಲ್ಲ. ಈ ವಿಷಯವು ಇಬ್ಬರಿಗೂ ಸಮ್ಮತವಾಗಿದೆ. ಪ್ರಕೃತ ವಿಮತಿಗೆ ವಿಷಯನಾದ ಬ್ರಹ್ಮನು ಯಾವಾಗಲೂ ಸರ್ವಜ್ಞನೇ

ಆಗಿರುತ್ತಾನೆ. ಇಂತಹ ಬ್ರಹ್ಮನಲ್ಲಿ ಯಾವ ಕಾಲದಲ್ಲಿಯೂ ಯಾವುದೇ ವಿಷಯದಲ್ಲಿಯೂ ಅಜ್ಞಾನವಿರಲು ಸಾಧ್ಯವೇ ಇಲ್ಲ ಎಂಬುದಾಗಿ ಅನುಮಾನ-ದಿಂದ ನಿಶ್ಚಯವಾಗುತ್ತದೆ. ಈ ಅನುಮಾನದಲ್ಲಿ 'ಯದಾ ಯತ್ರ ಜ್ಞಾನವಾನ್ ನಾಸೌ ತದಾ ತತ್ರ ಅಜ್ಞಾನವಾನ್' ಎಂಬ ಸಾಮಾನ್ಯಮುಖೀವ್ಯಾಪ್ತಿಯು ವಿವಕ್ಷಿತವಾದ್ದರಿಂದ ಅನ್ವಯದೃಷ್ಟಾಂತವಿಲ್ಲವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ.

## ಜ್ಞಾನವಿದ್ದಲ್ಲಿ ಅಜ್ಞಾನವಿರದು

ಮಂದಾರಮಂಜರೀ–

विमता विषया वा कदापि न तदज्ञानविषयाः सदा तज्ज्ञान-विषयत्वात् यो यदा यज्ज्ञानविषयः नासौ तदा तदज्ञानविषयः यथो-भयसम्मत इत्यभिप्रेत्य सिद्धान्तयति – **मैवमिति** ।।

ವಿಮತಾ ವಿಷಯಾ ವಾ ಕದಾಪಿ ನ ತದಜ್ಞಾನವಿಷಯಾಃ ಸದಾ ತಜ್ಜ್ಞಾನವಿಷಯತ್ವಾತ್ ಯೋ ಯದಾ ಯಜ್ಜ್ಞಾನವಿಷಯಃ ನಾಸೌ ತದಾ ತದಜ್ಞಾನವಿಷಯಃ ಯಥೋಭಯಸಮ್ಮತಃ ಇತ್ಯಭಿಪ್ರೇತ್ಯ ಸಿದ್ಧಾಂತಯತಿ – ಮೈವಮಿತಿ ॥

ಯಾವ ಪದಾರ್ಥವು ಯಾವ ವ್ಯಕ್ತಿಯ ಜ್ಞಾನಕ್ಕೆ ವಿಷಯವಾಗಿದೆಯೋ ಅದೇ ಪದಾರ್ಥವು ಅದೇ ಕಾಲದಲ್ಲಿ ಅದೇ ವ್ಯಕ್ತಿಯ ಅಜ್ಞಾನಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಘಟವು ದೇವದತ್ತನ ಜ್ಞಾನಕ್ಕೆ ಯಾವ ಕಾಲದಲ್ಲಿ ವಿಷಯವಾಗಿರುತ್ತದೋ ಅದೇ ಕಾಲದಲ್ಲಿಯೇ ಅದೇ ದೇವದತ್ತನ ಅಜ್ಞಾನಕ್ಕೆ ವಿಷಯವಾಗಲು ಸಾಧ್ಯವಿಲ್ಲ ಎಂಬುದು ಇಬ್ಬರಿಗೂ ಸಮ್ಮತವಾಗಿದೆ. ಅದರಂತೆ ವಿಮತಿಗೆ ವಿಷಯವಾದ ಸಕಲಪದಾರ್ಥಗಳು ನಿರಂತರವಾಗಿ ಈಶ್ವರನ ಜ್ಞಾನಕ್ಕೆ ವಿಷಯವಾಗಿರುವುದರಿಂದ ಯಾವ ಕಾಲದಲ್ಲಿಯೂ ಈಶ್ವರನ ಅಜ್ಞಾನಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಈ ಅನುಮಾನದಲ್ಲಿ 'ಯದಾ ಯತ್ರ ಜ್ಞಾನ-

ವಾನ್ ನಾಸೌ ತದಾ ತತ್ರ ಅಜ್ಞಾನವಾನ್' ಎಂಬ ಸಾಮಾನ್ಯಮುಖೀ-ವ್ಯಾಪ್ತಿಯನ್ನೇ ವಿವಕ್ಷಿಸಿದ್ದರಿಂದ ದೋಷಕ್ಕೆ ಅವಕಾಶವಿಲ್ಲ. ಈ ಎರಡು ಅನುಮಾನಗಳನ್ನು ಉದ್ದೇಶಿಸಿ ಟೀಕೆಯಲ್ಲಿ 'ಮೈವಮ್' ಇತ್ಯಾದಿವಾಕ್ಯದಿಂದ ಸಿದ್ಧಾಂತವನ್ನು ಸ್ಥಾಪನೆ ಮಾಡಿದ್ದಾರೆ.

## ಭ್ರಾಂತಿಯಿಂದ ಸಾರ್ವಜ್ಞ್ಯ ಹೇಳಬಹುದೇ?

ಮಂದಾರಮಂಜರೀ–

शङ्कते – नन्विति ।। **प्रमाणत इति** ।। अन्तःकरणवृत्त्येत्यर्थः ।। **भ्रान्त्या वेति** ।। ननु कथमेतत् ? भ्रान्तिर्हि विशेषाज्ञाननिबन्धना । विशेषाज्ञानं च सर्वज्ञस्य न सम्भवतीति चेन्न । विशेषज्ञानस्यापि भ्रान्तिरूपस्य स्थाणौ करचरणादिभ्रान्तेरिव भ्रान्त्यङ्गत्वात् ।

**ಶಂಕತೇ – ನನ್ವಿತಿ ॥ ಪ್ರಮಾಣತ ಇತಿ ॥ 'ಅಂತಃಕರಣವೃತ್ತ್ಯಾ' ಇತ್ಯರ್ಥಃ। ಭ್ರಾಂತ್ಯಾ ವೇತಿ ॥ ನನು ಕಥಮೇತತ್? ಭ್ರಾಂತಿರ್ಹಿ ವಿಶೇಷಾಜ್ಞಾನನಿಬಂಧನಾ। ವಿಶೇಷಾಜ್ಞಾನಂ ಚ ಸರ್ವಜ್ಞಸ್ಯ ನ ಸಂಭವತೀತಿ ಚೇನ್ನ । ವಿಶೇಷಜ್ಞಾನಸ್ಯಾಪಿ ಭ್ರಾಂತಿರೂಪಸ್ಯ ಸ್ಥಾಣೌ ಕರಚರಣಾದಿಭ್ರಾಂತೇರಿವ ಭ್ರಾಂತ್ಯಂಗತ್ವಾತ್ ।**

ಪೂರ್ವಪಕ್ಷಿಯು 'ನನು' ಇತ್ಯಾದಿ ವಾಕ್ಯದಿಂದ ಆಕ್ಷೇಪಿಸುತ್ತಿದ್ದಾನೆ. ಪ್ರಮಾಣತಃ ಎಂದರೆ ಅಂತಃಕರಣವೃತ್ತಿಯಿಂದ ಎಂದರ್ಥ.

ಭ್ರಾಂತ್ಯಾ ಸರ್ವಜ್ಞತ್ವವನ್ನು ಹೇಳಲು ಹೇಗೆ ಸಾಧ್ಯ? ಏಕೆಂದರೆ ಭ್ರಾಂತಿಯು ಬರಬೇಕಾದರೆ ಅಧಿಷ್ಠಾನವಿಶೇಷದ ಅಜ್ಞಾನವಿರಬೇಕು. ವಿಶೇಷ ಅಜ್ಞಾನವೇ ಭ್ರಾಂತಿಗೆ ಮೂಲವಾಗಿರುತ್ತದೆ. ಬ್ರಹ್ಮನಿಗೆ ಎಲ್ಲಾ ವಿಶೇಷ್ಯಗಳ ಜ್ಞಾನವು ಇರುವುದರಿಂದ ಸರ್ವಜ್ಞನಾದ ಬ್ರಹ್ಮನಿಗೆ ಅಜ್ಞಾನವನ್ನು ಹೇಳಲು

ಸಾಧ್ಯವಿಲ್ಲ. ಆದ್ದರಿಂದಲೇ ಭ್ರಾಂತ್ಯಾ ಸಾರ್ವಜ್ಞ್ಯವನ್ನೂ ಕೂಡ ಹೇಳಲು ಬರುವುದಿಲ್ಲವಲ್ಲವೇ?

ಹೀಗೆ ಪ್ರಶ್ನಿಸಬಾರದು. ಕೆಲವೊಮ್ಮೆ ವಿಶೇಷಜ್ಞಾನವೇ ಭ್ರಾಂತಿಗೆ ಕಾರಣ-ವಾಗುವುದು ಕಂಡಿದೆ. ಉದಾಹರಣೆ – ಸ್ಥಾಣುವನ್ನು ನೋಡಿದಾಗ 'ಅಯಂ ಪುರುಷಃ' ಎಂಬ ಭ್ರಾಂತಿಯು ಬರುತ್ತದೆ. ಈ ಭ್ರಾಂತಿಗೆ ಸ್ಥಾಣುತ್ವದ ವಿಶೇಷಜ್ಞಾನವು ಹೇಗೆ ಕಾರಣವೋ ಅದರಂತೆ ಪುರುಷನ ಕರಚರಣಾದಿಗಳ ಜ್ಞಾನವೂ ಭ್ರಾಂತಿಗೆ ಕಾರಣವಾಗಿದೆ. ಸ್ಥಾಣುವಿನಲ್ಲಿ ಕರಚರಣಾದಿಗಳು ಇಲ್ಲದಿದ್ದರೂ ಕರಚರಣಾದಿಗಳ ಭ್ರಾಂತಿಯಿಂದ ಪುರುಷತ್ವದ ಭ್ರಮೆ ಉಂಟಾಗಿದೆ. ಅಂದರೆ ಸ್ಥಾಣುವಿನಲ್ಲಿರುವ ಶಾಖೋಪಶಾಖೆಗಳನ್ನೇ ನೋಡಿ ಪುರುಷನ ಕರಚರಣಾದಿಗಳೆಂದು ಭ್ರಮಿಸಿದ್ದಾನೆ. ಇಂತಹ ಭ್ರಮೆಯಿಂದ 'ಅಯಂ ಪುರುಷಃ' (ಇದು ಪುರುಷನು) ಎಂಬ ಭ್ರಮೆಯು ಹುಟ್ಟಿದೆ. ಆದ್ದರಿಂದ ಅಧಿಷ್ಠಾನವಿಶೇಷ ಅಜ್ಞಾನವು ಭ್ರಾಂತಿಗೆ ಹೇಗೆ ಕಾರಣವಾಗು-ತ್ತದೋ ಅದರಂತೆ ಭ್ರಾಂತಿರೂಪವಾದ ವಿಶೇಷಜ್ಞಾನವೂ ಕೂಡ ಮತ್ತೊಂದು ಭ್ರಾಂತಿಗೆ ಕಾರಣವಾಗುತ್ತದೆ. ಪ್ರಕೃತ ಬ್ರಹ್ಮನಿಗೆ ಸಕಲಪದಾರ್ಥಗಳ ವಿಶೇಷ-ಜ್ಞಾನವು ಇದ್ದರೂ ಕೂಡ ಈ ವಿಶೇಷಜ್ಞಾನವೇ ಮತ್ತೊಂದು ಭ್ರಾಂತಿಗೆ ಕಾರಣವಾಗಬಹುದು. ಅಂತಹ ಭ್ರಾಂತಿಯಿಂದ ಸರ್ವಜ್ಞತ್ವವನ್ನೂ ಹೇಳ-ಬಹುದೆಂದು ಅಭಿಪ್ರಾಯ.

## ಪ್ರಮಾತೃತ್ವಕ್ಕೆ ಬ್ರಹ್ಮನು ಆಶ್ರಯನೇ?'

ಮಂದಾರಮಂಜರೀ–

आद्ये अज्ञानावश्यम्भाव इत्याह – **कूटस्थस्येति** ।। कूटवत्ति-ष्ठतीति कूटस्थः निर्विकारः तस्येत्यर्थः । प्रमातृत्वं हि प्रमाश्रयत्वम् ।

आश्रयाश्रयिभावश्च निर्विकारे न सम्भवतीति भावः । द्वितीयेऽप्यज्ञान-मावश्यकमित्याह – **भ्रान्तेश्चेति** ।।

ಆದ್ಯೇ ಅಜ್ಞಾನಾವಶ್ಯಂಭಾವ ಇತ್ಯಾಹ – ಕೂಟಸ್ಥಸ್ಯೇತಿ ॥ ಕೂಟವತ್ ತಿಷ್ಠತೀತಿ ಕೂಟಸ್ಥಃ = ನಿರ್ವಿಕಾರಃ, ತಸ್ಯೇತ್ಯರ್ಥಃ।

ಪ್ರಮಾತೃತ್ವಂ ಹಿ ಪ್ರಮಾಶ್ರಯತ್ವಮ್ । ಆಶ್ರಯಾಶ್ರಯೀಭಾವಶ್ಚ ನಿರ್ವಿಕಾರೇ ನ ಸಂಭವತೀತಿ ಭಾವಃ। ದ್ವಿತೀಯೇಽಪ್ಯಜ್ಞಾನಮಾವಶ್ಯಕಮಿತ್ಯಾಹ – ಭ್ರಾಂತೇಶ್ಚೇತಿ ॥

ಅಂತಃಕರಣವೃತ್ತಿಯೆಂಬ ಪ್ರಮಾಣದಿಂದ ಎಲ್ಲವನ್ನೂ ತಿಳಿಯುತ್ತಾನೆಂದು ಒಪ್ಪಿದರೆ ಅಜ್ಞಾನವನ್ನು ಅವಶ್ಯವಾಗಿ ಬ್ರಹ್ಮನಲ್ಲಿ ಒಪ್ಪಬೇಕಾಗುತ್ತದೆಂಬುದನ್ನು 'ಕೂಟಸ್ಥಸ್ಯ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

ಕೂಟಸ್ಥ ಶಬ್ದಕ್ಕೆ ಕೂಟವತ್ ತಿಷ್ಠತೀತಿ ಕೂಟಸ್ಥಃ ಎಂಬ ನಿರ್ವಚನದಿಂದ ನಿರ್ವಿಕಾರ ಎಂಬ ಅರ್ಥವನ್ನು ತಿಳಿಯಬೇಕು.

ಯಾವ ರೀತಿಯಾಗಿ ಅವ್ಯಾಕೃತಾಕಾಶಕ್ಕೆ ವಿಕಾರವಿಲ್ಲವೋ ಅದರಂತೆ ಬ್ರಹ್ಮನಿಗೂ ಕೂಡ ವಿಕಾರವಿಲ್ಲ ಎಂಬುದು ಇದರ ಅಭಿಪ್ರಾಯ.

ಪ್ರಮಾತೃತ್ವ ಎಂದರೆ ಯಥಾರ್ಥಜ್ಞಾನಕ್ಕೆ ಆಶ್ರಯವಾಗಿರುವಿಕೆ ಎಂದರ್ಥ.

ನಿರ್ವಿಕಾರನಾದ ಬ್ರಹ್ಮನು ಪ್ರಮಾತೃತ್ವಕ್ಕೆ ಆಶ್ರಯನಾಗಲು ಸಾಧ್ಯವಿಲ್ಲ. ನಿರ್ವಿಕಾರನಲ್ಲಿ ಆಶ್ರಯಾಶ್ರಯೀಭಾವವು ಸರ್ವಥಾ ಯುಕ್ತವಾಗುವುದಿಲ್ಲ.

ಎರಡನೆಯ ಪಕ್ಷದಲ್ಲಿಯೂ ಅಜ್ಞಾನ ಆವಶ್ಯಕವೆಂದು 'ಭ್ರಾಂತೇಶ್ಚ' ಎಂಬುದರಿಂದ ಹೇಳುತ್ತಿದ್ದಾರೆ.

## ಅದ್ವೈತಿಗಳಿಗೆ ಉತ್ತರ

ಮಂದಾರಮಂಜರೀ–

तृतीयेऽप्यज्ञानं स्वीकर्तव्यमित्याह – **स्वरूपेति** ।। **इति श्रुतेरिति** ।। सङ्गाभावः श्रुत्यर्थः इति मन्यते । परिहरति – **मैवमिति** ।।

**ತೃತೀಯೇಽಪಿ ಅಜ್ಞಾನಂ ಸ್ವೀಕರ್ತವ್ಯಮಿತ್ಯಾಹ – ಸ್ವರೂಪೇತಿ ॥ ಇತಿ ಶ್ರುತೇರಿತಿ ॥ ಸಂಗಾಭಾವಃ ಶ್ರುತ್ಯರ್ಥಃ ಇತಿ ಮನ್ಯತೇ । ಪರಿಹರತಿ – ಮೈವಮಿತಿ ॥**

ಸ್ವಾಭಾವಿಕವಾದ ಪ್ರಜ್ಞೆಯಿಂದ ಸಾರ್ವಜ್ಞ್ಯವನ್ನು ಒಪ್ಪಬೇಕೆಂಬ ಮೂರನೆಯ ಪಕ್ಷದಲ್ಲಿಯೂ ಅಜ್ಞಾನವು ಬ್ರಹ್ಮನಲ್ಲಿ ಬಂದೇ ಬರುತ್ತದೆಂದು 'ಸ್ವರೂಪಪ್ರಜ್ಞಾಯಾಶ್ಚ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ. 'ಇತಿ ಶ್ರುತೇಃ' ಎಂದರೆ 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಗೆ ಯಾವುದೇ ಸಂಪರ್ಕವಿಲ್ಲವೆಂಬ ಅರ್ಥವನ್ನು ಹೇಳುತ್ತಿದೆಯೆಂದು ಶ್ರುತ್ಯರ್ಥವನ್ನು ತಿಳಿದಿದ್ದಾನೆ ಎಂದಭಿಪ್ರಾಯ. ಪೂರ್ವಪಕ್ಷಿಯ ಆಕ್ಷೇಪವನ್ನು 'ಮೈವಮ್' ಇತ್ಯಾದಿ ಗ್ರಂಥದಿಂದ ಪರಿಹರಿಸುತ್ತಿದ್ದಾರೆ.

## ವ್ಯಾಪ್ತಿಗೆ ವ್ಯಭಿಚಾರದೋಷ

ಮಂದಾರಮಂಜರೀ–

**स्वरूपज्ञानेनेति** ।। ननु कथमेतत् ? स्वरूपज्ञानस्य अज्ञानस्फोरकत्वेन तद्विरोधित्वाभावात् । ततश्च 'यो यत्र ज्ञानवान् नासौ तत्राज्ञानवान्' इति व्याप्तौ वृत्त्यतिरिक्तस्य स्वरूपज्ञानस्यापि विवक्षायां व्यभिचारः । 'त्वदुक्तमर्थं न जानामि' इत्यत्र ज्ञायमान एव साक्षिणा

त्वदुक्तेऽर्थे अज्ञानस्यास्माभिरङ्गीकारात् । वृत्तिमात्रविवक्षायां तु असिद्धिः । स्वरूपज्ञानेनैव सर्वज्ञत्वाङ्गीकारेण वृत्तेरभावादिति चेत् ।

ಸ್ವರೂಪಜ್ಞಾನೇನೇತಿ ॥ ನನು ಕಥಮೇತತ್? ಸ್ವರೂಪಜ್ಞಾನಸ್ಯ ಅಜ್ಞಾನಸ್ಪೋಫೇರಕತ್ವೇನ ತದ್ವಿರೋಧಿತ್ವಾಭಾವಾತ್ । ತತಶ್ಚ 'ಯೋ ಯತ್ರ ಜ್ಞಾನವಾನ್ ನಾಸೌ ತತ್ರಾಜ್ಞಾನವಾನ್' ಇತಿ ವ್ಯಾಪ್ತೌ ವೃತ್ತ್ಯತಿರಿಕ್ತಸ್ಯ ಸ್ವರೂಪಜ್ಞಾನಸ್ಯಾಪಿ ವಿವಕ್ಷಾಯಾಂ ವ್ಯಭಿಚಾರಃ । 'ತ್ವದುಕ್ತಮರ್ಥಂ ನ ಜಾನಾಮಿ' ಇತ್ಯತ್ರ ಜ್ಞಾಯಮಾನ ಏವ ಸಾಕ್ಷಿಣಾ ತ್ವದುಕ್ತೇಽರ್ಥೇ ಅಜ್ಞಾನಸ್ಯ ಅಸ್ಮಾಭಿರಂಗೀಕಾರಾತ್ । ವೃತ್ತಿಮಾತ್ರ-ವಿವಕ್ಷಾಯಾಂ ತು ಅಸಿದ್ಧಿಃ । ಸ್ವರೂಪಜ್ಞಾನೇನೈವ ಸರ್ವಜ್ಞತ್ವಾಂಗೀಕಾರೇಣ ವೃತ್ತೇರಭಾವಾದಿತಿ ಚೇತ್ ।

ಪರಮಾತ್ಮನು ಸ್ವಾಭಾವಿಕವಾದ ಸ್ವರೂಪಜ್ಞಾನದಿಂದಲೇ ಸರ್ವಜ್ಞನಾಗಿದ್ದಾನೆಂದು ಹೇಳಿದಾಗ ಅಜ್ಞಾನವು ಸರ್ವಥಾ ಬರುವುದಿಲ್ಲ ಎಂದು ಸಿದ್ಧಾಂತ ಮಾಡುತ್ತಿದ್ದೀರಿ. ಇದು ಹೇಗೆ ಸರಿ? ಏಕೆಂದರೆ ಅದ್ವೈತಮತದಲ್ಲಿ ಕೇವಲ ವೃತ್ತಿಜ್ಞಾನವು ಅಜ್ಞಾನಕ್ಕೆ ವಿರೋಧಿಯಾಗಿದೆಯೇ ಹೊರತು ಸ್ವರೂಪಜ್ಞಾನವು ಅಜ್ಞಾನಕ್ಕೆ ವಿರೋಧಿಯೇ ಅಲ್ಲ ಹೊರತು ಅಜ್ಞಾನಕ್ಕೆ ಪೂರಕವೇ ಆಗಿದೆ. ಆದ್ದರಿಂದ 'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್' 'ಯಾವಾತನು ಯಾವ ವಿಷಯದಲ್ಲಿ ಜ್ಞಾನವುಳ್ಳವನೋ ಅವನಿಗೆ ಆ ವಿಷಯದಲ್ಲಿ ಅಜ್ಞಾನವಿರಲು ಸಾಧ್ಯವಿಲ್ಲ' ಎಂಬ ವ್ಯಾಪ್ತಿಯಲ್ಲಿ ವೃತ್ತಿಜ್ಞಾನಕ್ಕಿಂತ ಅತಿರಿಕ್ತವಾದ ಸ್ವರೂಪಜ್ಞಾನವನ್ನೂ ಕೂಡ ವಿವಕ್ಷಿಸಿದರೆ ವ್ಯಭಿಚಾರವು ಬರುತ್ತದೆ. ಏಕೆಂದರೆ, ಸ್ವರೂಪಜ್ಞಾನವಿದ್ದರೂ ಅಜ್ಞಾನವು ಕೂಡ ಅದೇ ವಿಷಯದಲ್ಲೇ ಇರಬಹುದಾದ್ದರಿಂದ ವ್ಯಾಪ್ತಿಯು ವ್ಯಭಿಚರಿತವಾಗುತ್ತದೆ. ಸ್ವರೂಪಜ್ಞಾನವು ಅಜ್ಞಾನಕ್ಕೆ ಪೂರಕವಾಗಿದೆ ಎಂಬ ವಿಷಯದಲ್ಲಿ ದೃಷ್ಟಾಂತ

ಕಂಡಿದೆ. 'ತ್ವದುಕ್ತಂ ಅರ್ಥಂ ನ ಜಾನಾಮಿ' ಎಂದು ಹೇಳಿದಾಗ ಸಂಪೂರ್ಣ ಈ ಜ್ಞಾನವು ಸಾಕ್ಷಿರೂಪವಾಗಿದೆ. ಈ ಸಾಕ್ಷಿರೂಪಜ್ಞಾನದಲ್ಲಿ ಅರ್ಥವೂ ಕೂಡ ವಿಷಯವಾಗಿರುವುದರಿಂದ ಸಾಕ್ಷಿಯಿಂದ ಅರ್ಥವು ಜ್ಞಾಯಮಾನವಾಯಿತು. ಸ್ವರೂಪಜ್ಞಾನದಿಂದ ಅರ್ಥವು ಹೀಗೆ ತಿಳಿಯುತ್ತಿದ್ದರೂ ಕೂಡ ತ್ವದುಕ್ತಾರ್ಥ-ದಲ್ಲಿ ಅಜ್ಞಾನವೂ ಕೂಡ ಇರುತ್ತದೆ. ಏಕೆಂದರೆ 'ನ ಜಾನಾಮಿ' ಎಂದು ಹೇಳಲಾಗಿದೆ. 'ತ್ವದುಕ್ತಂ ಅರ್ಥಂ ನ ಜಾನಾಮಿ' ಎಂಬ ಸಾಕ್ಷಿರೂಪವಾದ ಸ್ವರೂಪಜ್ಞಾನಕ್ಕೆ ವಿಷಯವಾಗಿರುವ ಅರ್ಥದಲ್ಲೇ ಅಜ್ಞಾನವು ಜೊತೆಗಿರು-ವುದರಿಂದ ಸ್ವರೂಪಜ್ಞಾನವು ಅಜ್ಞಾನವಿರೋಧಿಯಲ್ಲ ಹೊರತು ಪೂರಕ ಎಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ 'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್' ಎಂಬ ವ್ಯಾಪ್ತಿಗೆ ನಮ್ಮಲ್ಲಿಯೇ ವ್ಯಭಿಚಾರ ಬರುತ್ತದೆ. ಏಕೆಂದರೆ, ಅಜ್ಞಾನವನ್ನು ಯಾವ ವಿಷಯದಲ್ಲಿ ಹೊಂದಿರುತ್ತೇವೋ ಅದೇ ವಿಷಯದಲ್ಲಿ ನಮಗೆ ಜ್ಞಾನವೂ ಕೂಡ ಇರುತ್ತದಾದ್ದರಿಂದ ಒಂದು ವೇಳೆ 'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್' ಎಂಬ ವ್ಯಾಪ್ತಿಯನ್ನು ಹೇಳಿದಂತಾಗುತ್ತದೆ. ಯಾವ ವ್ಯಕ್ತಿಗೆ ಯಾವ ವಿಷಯದಲ್ಲಿ ವೃತ್ತಿಜ್ಞಾನ ಬಂದಿರುತ್ತದೋ ಪುನಃ ಅದೇ ವ್ಯಕ್ತಿಗೆ ಅದೇ ವಿಷಯದಲ್ಲಿಯೇ ಅಜ್ಞಾನ ಬರಲು ಸಾಧ್ಯವಿಲ್ಲ. ಹಾಗಾಗಿ ವ್ಯಭಿಚಾರಕ್ಕೆ ಅವಕಾಶವಿಲ್ಲ. ಆದರೆ ಅನುಮಾನಕ್ಕೆ ಅಸಿದ್ಧಿ ದೋಷವು ಬರುತ್ತದೆ. 'ಬ್ರಹ್ಮಾ ನ ಅಜ್ಞಾನಾಶ್ರಯವಾನ್ ಸರ್ವವಿಷಯಕಜ್ಞಾನವತ್ತ್ವಾತ್' ಹೇತುವಿನಲ್ಲಿ ಸರ್ವವಿಷಯಕವೃತ್ತಿರೂಪ-ಜ್ಞಾನವತ್ತ್ವವನ್ನು ವಿವಕ್ಷಿಸಿದರೆ ಬ್ರಹ್ಮನಿಗೆ ವೃತ್ತಿರೂಪವಾದ ಜ್ಞಾನವೇ ಇಲ್ಲದಿರುವ ಕಾರಣ ಹೇತುವು ಪಕ್ಷದಲ್ಲಿ ಬರುವುದೇ ಇಲ್ಲ. ಆದ್ದರಿಂದ ಅನುಮಾನಕ್ಕೆ ಅಸಿದ್ಧಿದೋಷವು ಬರುತ್ತದೆ. ಏಕೆಂದರೆ ಬ್ರಹ್ಮನಲ್ಲಿ ಸ್ವರೂಪ-

ಜ್ಞಾನದಿಂದಲೇ ಸಾರ್ವಜ್ಞ್ಯವನ್ನು ಒಪ್ಪಿರುವ ಕಾರಣ ವೃತ್ತಿರೂಪಜ್ಞಾನವು ಸರ್ವಥಾ ಇರುವುದಿಲ್ಲ. ಹೀಗಿರುವಾಗ ಸ್ವರೂಪಜ್ಞಾನದಿಂದ ಸಾರ್ವಜ್ಞ್ಯವನ್ನು ಹೇಗೆ ಕೂಡಿಸುತ್ತೀರಿ?

## ಅಜ್ಞಾನಕ್ಕೆ ಎಲ್ಲಾ ವೃತ್ತಿಗಳು ವಿರೋಧಿಗಳಲ್ಲ

ಮಂದಾರಮಂಜರೀ–

मैवम् । वृत्तिमात्रस्य विरोधित्वे परोक्षवृत्तेरप्यज्ञाननिवर्तकत्वप्रसङ्गात् । तच्च त्वया 'परोक्षवृत्त्याप्यज्ञाननिवृत्तौ अभिव्यक्तापरोक्षैकरसचैतन्यसम्भेदेन अतीतादेरपरोक्षप्रसङ्गः' इति बाधकं पश्यता नाङ्गीक्रियते।

ಮೈವಮ್ । ವೃತ್ತಿಮಾತ್ರಸ್ಯ ವಿರೋಧಿತ್ವೇ ಪರೋಕ್ಷವೃತ್ತೇರಪಿ ಅಜ್ಞಾನನಿವರ್ತಕತ್ವಪ್ರಸಂಗಾತ್ । ತಚ್ಚ ತ್ವಯಾ 'ಪರೋಕ್ಷವೃತ್ತ್ಯಾಪ್ಯಜ್ಞಾನನಿವೃತ್ತೌ ಅಭಿವ್ಯಕ್ತಾಪರೋಕ್ಷೈಕರಸಚೈತನ್ಯಸಂಭೇದೇನ ಅತೀತಾದೇರಪರೋಕ್ಷಪ್ರಸಂಗಃ' ಇತಿ ಬಾಧಕಂ ಪಶ್ಯತಃ ನಾಂಗೀಕ್ರಿಯತೇ।

(ನ್ಯಾಯಾಮೃತದ ಅವಿದ್ಯಾವಿಷಯತ್ವಭಂಗಃ ಎಂಬ ಪ್ರಕರಣದಲ್ಲಿ ಮತ್ತು ಅವಿದ್ಯಾಪ್ರತ್ಯಕ್ಷಭಂಗಃ ಎಂಬ ಪ್ರಕರಣದಲ್ಲಿ ಅದ್ವೈತಿಗಳ ಈ ಆಕ್ಷೇಪವನ್ನು ವಿವರವಾಗಿ ನಿರಾಕರಿಸಿದ್ದಾರೆ. ಅದರ ಸಂಕ್ಷೇಪವನ್ನು ಇಲ್ಲಿ ಹೇಳಿದ್ದಾರೆ)

ಸಮಾಧಾನ – ಸ್ವರೂಪಜ್ಞಾನವು ಅಜ್ಞಾನಕ್ಕೆ ವಿರೋಧಿಯಲ್ಲ. ಕೇವಲ ವೃತ್ತಿಜ್ಞಾನವಷ್ಟೇ ಅಜ್ಞಾನಕ್ಕೆ ವಿರೋಧಿಯೆಂದು ಹೇಳುವ ನಿನ್ನ ಅಭಿಪ್ರಾಯವೇನು? ಎಲ್ಲಾ ವೃತ್ತಿಜ್ಞಾನವೂ ಕೂಡ ಅಜ್ಞಾನಕ್ಕೆ ವಿರೋಧಿಯೆಂದೋ ಅಥವಾ ಅಪರೋಕ್ಷವೃತ್ತಿಯು ಅಜ್ಞಾನಕ್ಕೆ ವಿರೋಧಿಯೆಂದೋ? ಒಂದು ವೇಳೆ ಎಲ್ಲಾ ವೃತ್ತಿಜ್ಞಾನವೂ ಅಜ್ಞಾನಕ್ಕೆ ವಿರೋಧಿಯೆಂದು ಹೇಳಿದರೆ ಅದ್ವೈತಿಗಳು ಅನುಮಾನ ಅಥವಾ ಆಗಮದಿಂದ ಜನ್ಯವಾದ ವ್ಯವಹಿತವಾದ

ಯಾವ ಪರೋಕ್ಷವೃತ್ತಿಯು ಹುಟ್ಟುತ್ತದೋ ಅದರಿಂದ ಅಜ್ಞಾನವು ಹೋಗುವುದಿಲ್ಲ ಎಂದು ಹೇಳಿದಂತಾಯಿತು. ಒಂದು ವೇಳೆ ಪರೋಕ್ಷವೃತ್ತಿಯಿಂದ ಅಜ್ಞಾನವು ಹೋಗುವುದಾದರೆ ಚೈತನ್ಯವು ಅಭಿವ್ಯಕ್ತವಾಗಬೇಕಾಗುತ್ತದೆ. ಚೈತನ್ಯವು ಅಪರೋಕ್ಷೈಕರಸವಾದದ್ದು. ಒಂದು ವೇಳೆ ಇಂತಹ ಅತೀತ-ಪದಾರ್ಥಗಳಲ್ಲಿ ಚೈತನ್ಯದಿಂದ ಅಭಿವ್ಯಕ್ತಿಯನ್ನು ಒಪ್ಪಿಬಿಟ್ಟರೆ ಅತೀತಪದಾರ್ಥ-ಗಳು ಅಪರೋಕ್ಷವಾಗಬೇಕಾಗುತ್ತವೆ. ಹೀಗೆ ಅದ್ವೈತಿಗಳೇ 'ಪರೋಕ್ಷವೃತ್ತ್ಯಾಪ್ಯ-ಜ್ಞಾನನಿವೃತ್ತೌ ಅಭಿವ್ಯಕ್ತಾಪರೋಕ್ಷೈಕರಸಚೈತನ್ಯಸಂಭೇದೇನ ಅತೀತಾದೇರಪ-ರೋಕ್ಷಪ್ರಸಂಗಃ' ಎಂಬುದಾಗಿ ಬಾಧಕವನ್ನು ಹೇಳಿರುತ್ತಾರೆ. ಆದ್ದರಿಂದ ಸಕಲ-ವೃತ್ತಿಜ್ಞಾನಗಳು ಅಜ್ಞಾನಕ್ಕೆ ನಿವರ್ತಕವೆಂದು ಹೇಳಲು ಸಾಧ್ಯವೇ ಇಲ್ಲ.

## ಅಪರೋಕ್ಷವೃತ್ತಿಯೂ ವಿರೋಧಿಯಲ್ಲ

ಮಂದಾರಮಂಜರೀ–

अपरोक्षवृत्तिर्विरोधिनीति चेन्न । तथा सति श्रवणमात्रेणापरोक्षज्ञानं वदतस्तव श्रवणजन्यज्ञानेनैव अज्ञाननिवृत्तौ मननादिवैयर्थ्यापातात् ।

ಅಪರೋಕ್ಷವೃತ್ತಿರ್ವಿರೋಧಿನೀತಿ ಚೇನ್ನ । ತಥಾ ಸತಿ ಶ್ರವಣಮಾತ್ರೇಣ ಅಪರೋಕ್ಷಜ್ಞಾನಂ ವದತಸ್ತವ ಶ್ರವಣಜನ್ಯಜ್ಞಾನೇನೈವ ಅಜ್ಞಾನನಿವೃತ್ತೌ ಮನನಾದಿವೈಯರ್ಥ್ಯಾಪಾತಾತ್ ।

ಅಪರೋಕ್ಷವೃತ್ತಿಯು ಅಜ್ಞಾನಕ್ಕೆ ವಿರೋಧಿ ಎಂಬ ಎರಡನೆಯ ಪಕ್ಷವು ಕೂಡ ಸರಿಯಲ್ಲ. ಹಾಗಾದಲ್ಲಿ ಕೇವಲ ಶ್ರವಣದಿಂದಲೇ ಅಪರೋಕ್ಷಜ್ಞಾನವು ಹುಟ್ಟುತ್ತದೆಂಬ ನಿಮ್ಮ ಸಿದ್ಧಾಂತದಲ್ಲಿ ಶ್ರವಣಜನ್ಯಜ್ಞಾನದಿಂದಲೇ ಅಜ್ಞಾನ-ನಿವೃತ್ತಿಯಾಗುತ್ತದೆಂದು ಹೇಳಿದಂತಾಯಿತು. ಅಜ್ಞಾನವು ನಿವೃತ್ತಿಯಾದ ಮೇಲೆ ಪುನಃ ಮನನ ನಿದಿಧ್ಯಾಸನಗಳನ್ನು ಆಚರಣೆ ಮಾಡುವ ಆವಶ್ಯಕತೆ ಇರುವುದಿಲ್ಲ. ಆದ್ದರಿಂದ ಎರಡನೆಯ ಪಕ್ಷವೂ ಕೂಡ ತಪ್ಪು.

## ಸ್ಫುರಣ ಆದರೆ ಅಜ್ಞಾನನಾಶ

ಮಂದಾರಮಂಜರೀ–

ननु स्फुरणपर्यवसायिनी वृत्तिरज्ञानविरोधिनी । श्रवणमात्रेण च मननिदिध्यासनसम्पाद्यासम्भावनाविपरीतभावनाप्रतिबन्धनिरासाभावेन स्फुरणपर्यवसायिनी वृत्तिर्नोदेतीति चेत्

ನನು ಸ್ಫುರಣಪರ್ಯವಸಾಯಿೀ ವೃತ್ತಿರಜ್ಞಾನವಿರೋಧಿನೀ । ಶ್ರವಣ-ಮಾತ್ರೇಣ ಚ ಮನನನಿದಿಧ್ಯಾಸನಸಂಪಾದ್ಯಾಸಂಭಾವನಾವಿಪರೀತ ಭಾವನಾ-ಪ್ರತಿಬಂಧನಿರಾಸಾಭಾವೇನ ಸ್ಫುರಣಪರ್ಯವಸಾಯಿನೀ ವೃತ್ತಿರ್ನೋದೇತೀತಿ ಚೇತ್

ಆಕ್ಷೇಪ – ಯಾವುದೋ ವೃತ್ತಿಯು ಅಜ್ಞಾನನಿವರ್ತಕವಲ್ಲ. ಸ್ಫುರಣ-ಪರ್ಯವಸಾಯಿಯಾದ ವೃತ್ತಿಯಷ್ಟೇ ಅಜ್ಞಾನಕ್ಕೆ ವಿರೋಧಿಯಾಗುತ್ತದೆ. ಅಂದರೆ ಯಾವ ವೃತ್ತಿಜ್ಞಾನ ಬರುವುದರಿಂದ ಚೈತನ್ಯದ ಅಭಿವ್ಯಕ್ತಿ-ಯಾಗುತ್ತದೋ ಅಂತಹ ವೃತ್ತಿಯಿಂದ ಅಜ್ಞಾನವು ಪರಿಹಾರವಾಗುತ್ತದೆಂಬ ಪರಿಹಾರವನ್ನು ಮಾಡಿದ ಮಾತ್ರಕ್ಕೆ ವೃತ್ತಿಯು ಸ್ಫುರಣಪರ್ಯವಸಾಯಿ-ಯಾಗುವುದಿಲ್ಲ. ಅಸಂಭಾವನಾಶಂಕೆ ಹಾಗೂ ವಿಪರೀತಭಾವನೆ ಇವೆರಡನ್ನೂ ಪರಿಹರಿಸಲು ಮಧ್ಯದಲ್ಲಿ ಮನನ ಹಾಗೂ ನಿದಿಧ್ಯಾಸನಗಳನ್ನು ಆಚರಿಸಲೇ ಬೇಕು. ಈ ಪ್ರತಿಬಂಧಕಗಳನ್ನು ನಿರಾಸೆ ಮಾಡುವ ಮೂಲಕ ವೃತ್ತಿಯು ಸ್ಫುರಣಪರ್ಯವಸಾಯಿಯಾಗುತ್ತದೆ. ಒಂದು ವೇಳೆ ಶ್ರವಣವನ್ನಷ್ಟೇ ಮಾಡಿ-ದರೆ ಅಸಂಭಾವನಾಶಂಕೆ ವಿಪರೀತ ಭಾವನೆಗಳು ಹಾಗೆಯೇ ಉಳಿಯು-ವುದರಿಂದ ಬಂದಿರುವಂತಹ ವೃತ್ತಿಜ್ಞಾನವು ಚೈತನ್ಯದ ಅಭಿವ್ಯಕ್ತಿಗೆ ಕಾರಣ-ವಾಗುವುದಿಲ್ಲವಲ್ಲವೇ?

## ಸ್ಫುರಣ ಎಂದರೆ ವೃತ್ತಿಜ್ಞಾನವಲ್ಲವೇ?

ಮಂದಾರಮಂಜರೀ–

तर्हि प्राप्ताप्राप्तविवेकेन स्फुरणापरपर्यायं स्वरूपज्ञानमेव निवर्तकमिति कथं सर्वज्ञस्याज्ञानम् ।

ತರ್ಹಿ ಪ್ರಾಪ್ತಾಪ್ರಾಪ್ತವಿವೇಕೇನ ಸ್ಫುರಣಾಪರಪರ್ಯಾಯಂ ಸ್ವರೂಪಜ್ಞಾನಮೇವ ನಿವರ್ತಕಮಿತಿ ಕಥಂ ಸರ್ವಜ್ಞಸ್ಯಾಜ್ಞಾನಮ್ ।

ಸಮಾಧಾನ – ಹಾಗಾದರೆ ಸ್ಫುರಣಪರ್ಯವಸಾಯಿಯಾದ ವೃತ್ತಿಯಷ್ಟೇ ಅಜ್ಞಾನಕ್ಕೆ ನಿರಾಸಕವಾಗುತ್ತದೆ.

## ವೃತ್ತಿಜ್ಞಾನಕ್ಕೆ ಅಜ್ಞಾನವೇ ಉಪಾದಾನ

ಮಂದಾರಮಂಜರೀ–

अपि च वृत्तेरज्ञानोपादेयत्वात् उपादानोपादेययोश्च विरोधाभावात् विरोधस्य च निवर्त्यनिवर्तकभावप्रयोजकत्वात् न कुत्रापि वृत्तिरज्ञानविरोधिनी ।

ಅಪಿ ಚ ವೃತ್ತೇರಜ್ಞಾನೋಪಾದೇಯತ್ವಾತ್ ಉಪಾದಾನೋಪಾದೇಯಯೋಶ್ಚ ವಿರೋಧಾಭಾವಾತ್ ವಿರೋಧಸ್ಯ ಚ ನಿವರ್ತ್ಯನಿವರ್ತಕಭಾವಪ್ರಯೋಜಕತ್ವಾತ್ ನ ಕುತ್ರಾಪಿ ವೃತ್ತಿರಜ್ಞಾನವಿರೋಧಿನೀ ।

ಮತ್ತು ಯಾವ ವೃತ್ತಿಜ್ಞಾನವು ಅಜ್ಞಾನಕ್ಕೆ ನಿವರ್ತಕವೆನ್ನುತ್ತೀರೋ ಆ ವೃತ್ತಿಜ್ಞಾನವು ಅಜ್ಞಾನದ ಉಪಾದೇಯವಾಗಿದೆ. ಅಂದರೆ ಎಲ್ಲವೂ ಕೂಡ ಅಜ್ಞಾನಜನ್ಯವಾದ್ದರಿಂದ ಈ ವೃತ್ತಿಜ್ಞಾನವೂ ಕೂಡ ಅಜ್ಞಾನ ಜನ್ಯವೇ ಆಗಿರುತ್ತದೆ. ಉಪಾದಾನವಾದ ಅಜ್ಞಾನಕ್ಕೂ ಉಪಾದೇಯವಾದ ವೃತ್ತಿಜ್ಞಾನಕ್ಕೂ ಪರಸ್ಪರ ನಿವರ್ತ್ಯನಿವರ್ತಕಭಾವಗಳು ಇರುವುದಿಲ್ಲ. ಏಕೆಂದರೆ ಲೋಕದಲ್ಲಿ

ಉಪಾದಾನ ಹಾಗೂ ಉಪಾದೇಯಗಳಿಗೆ ವಿರೋಧವು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ವೃತ್ತಿಜ್ಞಾನವಿದ್ದರೂ ಅಜ್ಞಾನವು ನಾಶವಾಗದೇ ಹಾಗೇ ಇರುತ್ತದೆ. ಆದ್ದರಿಂದ ಅಜ್ಞಾನಕ್ಕೆ ವೃತ್ತಿಜ್ಞಾನವು ವಿರೋಧಿ ಎಂದು ಅದ್ವೈತಿಗಳಿಗೆ ಸಾಧಿಸಲಾಗದು.

## ಅನುಮಾನಕ್ಕೆ ವ್ಯಭಿಚಾರವಿಲ್ಲ

ಮಂದಾರಮಂಜರೀ–

एवं च 'त्वदुक्तमर्थं न जानामि' इत्यादौ स्वरूपज्ञानाङ्गीकारे तदपि पक्षतुल्यमिति कुतो व्यभिचारः? इत्यलम् ।

**ಏವಂ ಚ 'ತ್ವದುಕ್ತಮರ್ಥಂ ನ ಜಾನಾಮಿ' ಇತ್ಯಾದೌ ಸ್ವರೂಪ-ಜ್ಞಾನಾಂಗೀಕಾರೇ ತದಪಿ ಪಕ್ಷತುಲ್ಯಮಿತಿ ಕುತೋ ವ್ಯಭಿಚಾರಃ? ಇತ್ಯಲಮ್ ।**

ಆದ್ದರಿಂದ 'ತ್ವದುಕ್ತಮರ್ಥಂ ನ ಜಾನಾಮಿ' ಎಂಬಲ್ಲಿಯೂ ಸ್ವರೂಪ-ಜ್ಞಾನವನ್ನು ಅಂಗೀಕರಿಸಿದರೆ ಅದನ್ನೂ ಕೂಡ ನಾವು ಪಕ್ಷತುಲ್ಯವೆಂದು ವಿವಕ್ಷಿಸುತ್ತೇವೆ. ಹಾಗಾಗಿ ವ್ಯಭಿಚಾರವನ್ನು ಹೇಗೆ ತಾನೇ ಹೇಳುತ್ತೀರಿ? ಅಂದರೆ, ತ್ವದುಕ್ತಾರ್ಥದಲ್ಲಿ ಸಾಮಾನ್ಯಜ್ಞಾನವಿದೆ ಎಂದು ಹೇಳಿದಾಗ ಆ ವಿಷಯದಲ್ಲಿ ಅಜ್ಞಾನವಿರುವುದಿಲ್ಲ; ವಿಶೇಷದ ಅಜ್ಞಾನವಿದೆ ಎಂದು ಹೇಳಿದಾಗ ಆ ವಿಷಯದಲ್ಲಿ ಜ್ಞಾನವಿರಲು ಸಾಧ್ಯವಿಲ್ಲವೆಂದು ಸಾಧಿಸುತ್ತೇವೆ. ಆದ್ದರಿಂದ ವ್ಯಭಿಚಾರಕ್ಕೆ ದೋಷವಿಲ್ಲ.

## ಸಂಗವಿಲ್ಲದಿದ್ದರೆ ವ್ಯಾಪ್ತನಾಗುವನೇ?

ಮಂದಾರಮಂಜರೀ–

**न च सम्बन्धेति ।।** सम्बन्धाभावपरत्वे व्याप्तत्वव्याघातः । युगपत्सर्वसम्बन्धित्वस्य व्याप्तत्वात् ।

ನ ಚ ಸಂಬಂಧೇತಿ ॥ ಸಂಬಂಧಾಭಾವಪರತ್ವೇ ವ್ಯಾಪ್ತತ್ವವ್ಯಾಘಾತಃ । ಯುಗಪತ್ಸರ್ವಸಂಬಂಧಿತ್ವಸ್ಯ ವ್ಯಾಪ್ತತ್ವಾತ್ ।

'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯು ಪರಮಾತ್ಮನಲ್ಲಿ ಯಾವುದೇ ಸಂಬಂಧವಿಲ್ಲವೆಂದು ಹೇಳುತ್ತಿಲ್ಲ. ಒಂದು ವೇಳೆ ಯಾವ ಪದಾರ್ಥಗಳ ಸಂಬಂಧವೂ ಕೂಡ ಪರಮಾತ್ಮನಿಗಿಲ್ಲ ಎನ್ನುವುದಾದರೆ ಪರಮಾತ್ಮನು ವ್ಯಾಪ್ತನಾಗಿದ್ದಾನೆಂಬ ಮಾತಿನಿಂದ ವ್ಯಾಹತಿ ಬರುತ್ತದೆ. ಏಕೆಂದರೆ ಯುಗಪತ್‌ಸರ್ವಸಂಬಂಧಿತ್ವವೇ ವ್ಯಾಪ್ತತ್ವವೆನಿಸುತ್ತದೆ. ಸಕಲ-ಪದಾರ್ಥಗಳ ಸಂಬಂಧವು ಒಟ್ಟಿಗೆ ಪರಮಾತ್ಮನಲ್ಲಿರುವುದರಿಂದ ಅವನು ವ್ಯಾಪ್ಯನೆನಿಸಿದ್ದಾನೆ. ಪ್ರಕೃತ ಯಾವ ಪದಾರ್ಥಗಳ ಸಂಪರ್ಕವೂ ಇಲ್ಲವೆನ್ನು-ವುದಾದರೆ ಇಂತಹ ವ್ಯಾಪ್ತತ್ವದಿಂದ ವಿರೋಧ ಬರುತ್ತದೆಂದು ಅಭಿಪ್ರಾಯ.

## ವ್ಯಾಪ್ತತ್ವ ಎಂದರೆ ಮಹತ್‌ಪರಿಮಾಣಾಶ್ರಯತ್ವ

ಮಂದಾರಮಂಜರೀ–

न च महत्परिमाणाश्रयत्वं व्याप्तत्वम् । त्वया ब्रह्मणि परिमाणा-नङ्गीकारात् ।

ನ ಚ ಮಹತ್ಪರಿಮಾಣಾಶ್ರಯತ್ವಂ ವ್ಯಾಪ್ತತ್ವಮ್ । ತ್ವಯಾ ಬ್ರಹ್ಮಣಿ ಪರಿ-ಮಾಣಾನಂಗೀಕಾರಾತ್ ।

ಆಕ್ಷೇಪ – ವ್ಯಾಪ್ತತ್ವವೆಂದರೆ ಯುಗಪತ್ಸರ್ವಸಂಬಂಧಿತ್ವವಲ್ಲ. ಹೊರ-ತಾಗಿ ಮಹತ್ಪರಿಮಾಣಾಶ್ರಯತ್ವ. ಮಹತ್ಪರಿಮಾಣಕ್ಕೆ ಆಶ್ರಯನಾಗಿರುವು-ದರಿಂದಲೇ ಪರಮಾತ್ಮನು ವ್ಯಾಪ್ತನಾಗಿದ್ದಾನಲ್ಲವೇ?

ಸಮಾಧಾನ – ಅದ್ವೈತಿಯಾದ ನೀನು ಬ್ರಹ್ಮನಲ್ಲಿ ಯಾವುದೇ ಪರಿ-

ಮಾಣವನ್ನು ಅಂಗೀಕರಿಸಿಲ್ಲ. ಹೀಗಿರುವಾಗ ಮಹತ್ಪರಿಮಾಣಕ್ಕೆ ಆಶ್ರಯನಾಗಿದ್ದಾನೆಂದು ಹೇಳಲು ನಿನ್ನಿಂದ ಸಾಧ್ಯವಿಲ್ಲ.

## ದೇಶಪರಿಚ್ಛೇದಾಭಾವ ಎನ್ನಬಾರದು

ಮಂದಾರಮಂಜರೀ–

न च देशपरिच्छेदाभावो व्याप्तत्वम् असत्यतिव्याप्तेः । न ह्यसत् 'अत्रैव' इति देशविशेषेणावच्छिद्यते ।

**ನ ಚ ದೇಶಪರಿಚ್ಛೇದಾಭಾವೋ ವ್ಯಾಪ್ತತ್ವಮ್ ಅಸತಿ ಅತಿವ್ಯಾಪ್ತೇಃ । ನ ಹ್ಯಸತ್ 'ಅತ್ರೈವ' ಇತಿ ದೇಶವಿಶೇಷಣೇನಾವಚ್ಛಿದ್ಯತೇ ।**

**ಆಕ್ಷೇಪ** – ಹಾಗಾದರೆ ದೇಶಪರಿಚ್ಛೇದಾಭಾವವನ್ನೇ ವ್ಯಾಪ್ತತ್ವವೆನ್ನುತ್ತೇವೆ. ಪರಮಾತ್ಮನು ಇಷ್ಟೇ ದೇಶದಲ್ಲಿದ್ದಾನೆಂಬ ಪರಿಚ್ಛೇದವಿಲ್ಲದ ಕಾರಣ ವ್ಯಾಪ್ತನಾಗಿದ್ದಾನೆನ್ನಬಹುದಲ್ಲವೇ?

**ಸಮಾಧಾನ** – ಈ ಲಕ್ಷಣವು ಅಸತ್ ಪದಾರ್ಥದಲ್ಲಿ ಅತಿವ್ಯಾಪ್ತವಾಗಿದೆ. ಅಸತ್‌ಪದಾರ್ಥವೇ ಇಲ್ಲದ ಕಾರಣ ದೇಶಪರಿಚ್ಛೇದವೂ ಕೂಡ ಅಸತ್ತಿನಲ್ಲಿ ಇರುವುದಿಲ್ಲ. ಏಕೆಂದರೆ ಅಸತ್ ಪದಾರ್ಥವು 'ಅತ್ರೈವ = ಇಲ್ಲಿಯೇ ಇದೆ' ಎಂಬ ದೇಶವಿಶೇಷದಿಂದ ಕರೆಯಲು ಯೋಗ್ಯವಾಗಿರುವುದಿಲ್ಲ.

## 'ಸತ್ತ್ವ' ಎಂಬ ವಿಶೇಷಣವೂ ವ್ಯರ್ಥ

ಮಂದಾರಮಂಜರೀ–

न च सत्त्वे सतीति विशेषणीयम् । ब्रह्मण्यपि स्वरूपातिरिक्तसत्त्वानभ्युपगमात् । तत्तद्वस्तुसम्बन्धाभावे तस्यैवासम्भवाच ।

**ನಚ ಸತ್ತ್ವೇ ಸತೀತಿ ವಿಶೇಷಣೀಯಮ್ । ಬ್ರಹ್ಮಣ್ಯಪಿ ಸ್ವರೂಪಾತಿರಿಕ್ತ-**

ಸತ್ತ್ವಾನಭ್ಯುಪಗಮಾತ್ । ತತ್ತದ್ವಸ್ತುಸಂಬಂಧಾಭಾವೇ ತಸ್ಯೈವಾಸಂಭವಾಚ್ಚ।

ಆಕ್ಷೇಪ – 'ಸತ್ವೇ ಸತಿ ದೇಶಪರಿಚ್ಛೇದಾಭಾವ'ವನ್ನು ವ್ಯಾಪ್ತತ್ವವೆನ್ನುತ್ತೇವೆ. ಅಸತ್ ಪದಾರ್ಥದಲ್ಲಿ ಸತ್ವವೆಂಬ ವಿಶೇಷಣವಿಲ್ಲದ ಕಾರಣ ವ್ಯಾಪ್ತಿಯ ಲಕ್ಷಣವು ಅದರಲ್ಲಿ ಬರುವುದಿಲ್ಲವಲ್ಲವೇ?

ಸಮಾಧಾನ – ಈ ಲಕ್ಷಣವು ಬ್ರಹ್ಮನಲ್ಲಿಯೂ ಕೂಡ ಬರುವುದಿಲ್ಲ. ಏಕೆಂದರೆ ನಿಮ್ಮ ಸಿದ್ಧಾಂತದ ಪ್ರಕಾರ ಬ್ರಹ್ಮನು ನಿರ್ಧರ್ಮಕನಾದುದರಿಂದ, ತನ್ನ ಸ್ವರೂಪಕ್ಕಿಂತ ಅತಿರಿಕ್ತವಾದ ಸತ್ವವೆಂಬ ಧರ್ಮವೂ ಕೂಡ ಅವನಲ್ಲಿರುವುದಿಲ್ಲ. ಮತ್ತು ಯಾವ ಪದಾರ್ಥಗಳ ಸಂಪರ್ಕವೂ ಬ್ರಹ್ಮನಲ್ಲಿ ಇಲ್ಲವೆಂದು ನೀವು ಹೇಳುವುದಾದರೆ ಅವನಲ್ಲಿ ಸತ್ವವನ್ನು ಸಾಧಿಸಲು ಕೂಡ ಸಾಧ್ಯವಿಲ್ಲ. ಶಶವಿಷಾಣದಂತೆ ಈ ಬ್ರಹ್ಮನೂ ಕೂಡ ಅತ್ಯಂತ ಅಸತ್ ಪದಾರ್ಥನೇ ಆಗಿದ್ದಾನೆ. ಆದ್ದರಿಂದ ಅದ್ವೈತಿಗಳಿಗೆ ಶಶವಿಷಾಣಕ್ಕೂ ಬ್ರಹ್ಮನಿಗೂ ವ್ಯತ್ಯಾಸವನ್ನು ಸಮರ್ಥಿಸಲು ಬಹಳ ಕಷ್ಟವಾಗುತ್ತದೆ.

## ಸರ್ವತ್ರವಿದ್ಯಮಾನವೆನ್ನಬಹುದೇ?

ಮಂದಾರಮಂಜರೀ–

सर्वत्र विद्यमानत्वं व्याप्तत्वमिति चेन्न । सर्वत्र विद्यमानत्वे तत्सम्बन्धस्यावर्जनीयत्वादिति भावः ।

ಸರ್ವತ್ರ ವಿದ್ಯಮಾನತ್ವಂ ವ್ಯಾಪ್ತತ್ವಮ್ ಇತಿ ಚೇನ್ನ। ಸರ್ವತ್ರ ವಿದ್ಯಮಾನತ್ವೇ ತತ್ಸಂಬಂಧಸ್ಯಾವರ್ಜನೀಯತ್ವಾದಿತಿ ಭಾವಃ।

ಆಕ್ಷೇಪ – 'ಸರ್ವತ್ರ ವಿದ್ಯಮಾನತ್ವಂ ವ್ಯಾಪ್ತತ್ವಂ' ಎನ್ನುತ್ತೇವೆ. ಬ್ರಹ್ಮನು ಎಲ್ಲೆಡೆಯೂ ಇರುವುದರಿಂದ ವ್ಯಾಪ್ತನಾಗಿದ್ದಾನಲ್ಲವೇ?

ಸಮಾಧಾನ – ಇಂತಹ ವ್ಯಾಪ್ತತ್ವವನ್ನು ಬ್ರಹ್ಮನಲ್ಲಿ ಒಪ್ಪುವುದಾದರೆ ಪದಾರ್ಥಗಳ ಸಂಬಂಧವನ್ನು ಬ್ರಹ್ಮನಲ್ಲಿ ಒಪ್ಪಿದಂತಾಯಿತು. ಆದ್ದರಿಂದ ಬ್ರಹ್ಮನು ವ್ಯಾಪ್ತನಾಗಿದ್ದಾನೆಂಬುದಕ್ಕೆ ಯುಗಪತ್ಸರ್ವಸಂಬಂಧಿತ್ವವನ್ನಾಗಲೀ ಹೇಳಲೇಬೇಕು. ಈ ಎರಡೂ ಪಕ್ಷದಲ್ಲಿ ಪದಾರ್ಥಗಳ ಸಂಬಂಧವನ್ನು ಬ್ರಹ್ಮನಲ್ಲಿ ಒಪ್ಪಲೆಬೇಕಾಗುತ್ತದೆಂಬ ಕಾರಣದಿಂದ ಸಂಬಂಧವಿರಹವನ್ನೇ ಅಸಂಗ ಎಂಬ ಪದದ ಅರ್ಥವನ್ನಾಗಿ ನಿಮಗೆ ವ್ಯಾಖ್ಯಾನಿಸಲು ಸಾಧ್ಯವಾಗು-ವುದಿಲ್ಲ.

## 'ಸಂವೇತ್ತುಃ' ಎಂಬುದರ ನಿಷ್ಪತ್ತಿ

ಮಂದಾರಮಂಜರೀ–

युक्त्यन्तरमप्याह – **यथेति ।। ताच्छीलिकतृन्प्रत्ययेनेति ।।** 'आकेस्तच्छीलिकतद्धर्मतत्साधुकारिषु' इत्यधिकृत्य 'तृन्' इत्यनेन सूत्रेण विहितो यस्तृन्प्रत्ययः तेनेत्यर्थः ।

ಯುಕ್ತ್ಯಂತರಮಪ್ಯಾಹ – ಯಥೇತಿ ॥ ತಾಚ್ಛೀಲಿಕತೃನ್‌ಪ್ರತ್ಯಯೇನೇತಿ । 'ಆಕ್ವೇಸ್ತಚ್ಛೀಲಿಕತದ್ಧರ್ಮತತ್ಸಾಧುಕಾರಿಷು' ಇತ್ಯಧಿಕೃತ್ಯ 'ತೃನ್' ಇತ್ಯನೇನ ಸೂತ್ರೇಣ ವಿಹಿತೋ ಯಸ್ತೃನ್‌ಪ್ರತ್ಯಯಃ ತೇನೇತ್ಯರ್ಥಃ।

ಮತ್ತೊಂದು ಯುಕ್ತಿಯನ್ನು ''ಯಥಾ'' ಎಂಬ ವಾಕ್ಯದಿಂದ ಸಮರ್ಥಿ-ಸುತ್ತಿದ್ದಾರೆ. ತಾಚ್ಛೀಲಿಕತೃನ್‌ಪ್ರತ್ಯಯೇನ ಎಂಬುದರ ಅಭಿಪ್ರಾಯ ಹೀಗಿದೆ – ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ 'ಆಕ್ವೇಸ್ತಚ್ಛೀಲಿಕತದ್ಧರ್ಮತತ್ಸಾಧುಕಾರಿಷು' ಎಂಬ ಅಧಿಕಾರಸೂತ್ರವಿದೆ. ಕ್ವಿ ಎಂಬ ಪ್ರತ್ಯಯದ ತನಕ ಎಷ್ಟು ಪ್ರತ್ಯಯ-ಗಳನ್ನು ವಿಧಿಸಲಾಗಿದೆಯೋ ಆ ಎಲ್ಲಾ ಪ್ರತ್ಯಯಗಳು ತಚ್ಛೀಲ, ತದ್ಧರ್ಮ, ತತ್ಸಾಧುಕಾರಿ ಈ ಮೂರು ಅರ್ಥಗಳಲ್ಲಿ ಬರುತ್ತವೆಂದು ಈ ಸೂತ್ರದ

ಅಭಿಪ್ರಾಯ. ಇದೇ ಅಧಿಕಾರಸೂತ್ರದ ಸರದಿಯಲ್ಲಿ ತೃನ್ ಎಂಬ ಸೂತ್ರದಿಂದ ತೃನ್ ಪ್ರತ್ಯಯವನ್ನು ವಿಧಿಸಲಾಗಿದೆ. ಈ ತೃನ್‌ಪ್ರತ್ಯಯವು ತಚ್ಛೀಲ ಎಂಬರ್ಥದಲ್ಲಿ ಬರುತ್ತದೆಂದು ಇದರಿಂದ ಸಿದ್ಧವಾಗುತ್ತದೆ.

## 'ವೇದಿತುಃ' ಎನ್ನಬೇಕಿತ್ತೇ?

ಮಂದಾರಮಂಜರೀ–

यद्यपि 'विद्यतिर्विनद्' इत्यनिट्कारिकायां श्यना श्नमा च निर्देशात् विद सत्तायां विद विचारणे इत्यनिट्त्वोक्त्या विद ज्ञान इत्यस्य सेट्त्वज्ञापनात् 'वेदिता विद्यानां' इति प्रयोगाच्च ज्ञानार्थविवक्षायाम् अखिलसंवेदितुः इति वक्तव्यम् ।

ಯದ್ಯಪಿ 'ವಿದ್ಯತಿರ್ವಿನದ್' ಇತ್ಯನಿಟ್‌ಕಾರಿಕಾಯಾಂ ಶ್ಯನಾ ಶ್ನಮಾ ಚ ನಿರ್ದೇಶಾತ್ 'ವಿದ ಸತ್ತಾಯಾಂ' 'ವಿದ ವಿಚಾರಣೇ' ಇತ್ಯನಿಟ್‌ತ್ವೋಕ್ತ್ಯಾ 'ವಿದ ಜ್ಞಾನೇ' ಇತ್ಯಸ್ಯ ಸೇಟ್‌ತ್ವಜ್ಞಾಪನಾತ್ 'ವೇದಿತಾ ವಿದ್ಯಾನಾಮ್' ಇತಿ ಪ್ರಯೋ-ಗಾಚ್ಚ ಜ್ಞಾನಾರ್ಥವಿವಕ್ಷಾಯಾಮ್ ಅಖಿಲಸಂವೇದಿತುಃ ಇತಿ ವಕ್ತವ್ಯಮ್ ।

ಶ್ರೀಮದಾಚಾರ್ಯರ ವಾಕ್ಯದಲ್ಲಿ 'ಅಖಿಲಸಂವೇತ್ತುಃ' ಎಂಬ ಪದ ಪ್ರಯೋಗವಿದೆ. ಪಾಣನಿಯ ವ್ಯಾಕರಣದಂತೆ 'ವೇದಿತುಃ' ಎಂದು ಹೇಳ-ಬೇಕು. ಹೀಗಿರುವಾಗ ಶ್ರೀಮದಾಚಾರ್ಯರು 'ವೇತ್ತುಃ' ಎಂಬ ಪದವನ್ನು ಹೇಗೆ ಪ್ರಯೋಗ ಮಾಡಿದರು. ಏಕೆಂದರೆ, 'ವಿದ ಜ್ಞಾನೇ' ಎಂಬು ಧಾತುವು ಸೇಟ್ ಧಾತುವಾಗಿದೆ. ಆದ್ದರಿಂದ 'ವಿದ್ ಇಟ್ ತೃನ್' ಎಂದಿರುವಾಗ ಗುಣವು ಪ್ರಾಪ್ತವಾದರೆ ವೇದ್, ಇಟ್, ತೃನ್, ಒಟ್ಟಿಗೆ ಸೇರಿಸಿದಾಗ 'ವೇದಿತುಃ' ಎಂದಾಗಬೇಕು. ವಿದ್ಯತಿರ್ವಿನದ್ ಎಂಬುದಾಗಿ ಅನಿಟ್‌ಕಾರಿಕೆಯಲ್ಲಿ ವಿನದ್ ಎಂಬುದನ್ನು ಶ್ಯನ್ ವಿಕರಣದಲ್ಲಿ ಪ್ರಯೋಗಿಸಲಾಗಿದೆ. ಅಂದರೆ ವಿದ

ಸತ್ತಾಯಾಂ ಎಂಬುದು ಮತ್ತು ವಿದ ವಿಚಾರಣೇ ಎಂಬುದು ಮಾತ್ರ ಅನಿಟ್ ಗಣದಲ್ಲಿ ಸೇರುತ್ತವೆ. ಇವೆರಡು ಮಾತ್ರ ಅನಿಟ್ ಎಂದು ಹೇಳಿದ್ದರಿಂದ 'ವಿದ ಜ್ಞಾನೇ' ಎಂಬುದು ಸೇಟ್ ಧಾತುವೆಂದು ತಿಳಿಯುತ್ತದೆ. ಮತ್ತು ವೇದಿತಾ ವಿದ್ಯಾನಾಂ ಎಂಬುದಾಗಿ ಪ್ರಯೋಗವೂ ಇರುವುದರಿಂದ ಸೇಟ್ ಧಾತುವೆಂಬುದು ಖಚಿತವಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರು 'ಅಖಿಲಸಂವೇದಿತುಃ' ಎಂದೇ ಪ್ರಯೋಗಿಸಬೇಕಿತ್ತು. ಸಂವೇತ್ತುಃ ಎಂದು ಹೇಗೆ ಪ್ರಯೋಗಿಸಿದರು?

## 'ಅಖಿಲಸಂವೇತ್ತುಃ' ಎಂಬುದೇ ಸರಿ

ಮಂದಾರಮಂಜರೀ–

तथापि विद विचारण इत्यस्य अनिट्त्वेन परिगणनात् अनिट्-कारिकायां 'विन्नवित्तौ विचारित' इति विचारणार्थस्यानिट्त्वेन प्रयोगाच्च विचारणार्थेन विदधातुना विचारसाध्यविशेषज्ञानस्य लक्षयितुं शक्यत्वात् अखिलसंवेत्तुः इति प्रयोगः साधुरिति द्रष्टव्यम् ।

ತಥಾಪಿ 'ವಿದ ವಿಚಾರಣೇ' ಇತ್ಯಸ್ಯ ಅನಿಟ್ತ್ವೇನ ಪರಿಗಣನಾತ್ ಅನಿಟ್ ಕಾರಿಕಾಯಾಂ 'ವಿನ್ನವಿತ್ತೌ ವಿಚಾರಿತೇ' ಇತಿ ವಿಚಾರಣಾರ್ಥಸ್ಯ ಅನಿಟ್ತ್ವೇನ ಪ್ರಯೋಗಾಚ್ಚ ವಿಚಾರಣಾರ್ಥೇನ ವಿದಧಾತುನಾ ವಿಚಾರಸಾಧ್ಯವಿಶೇಷಜ್ಞಾನಸ್ಯ ಲಕ್ಷಯಿತುಂ ಶಕ್ಯತ್ವಾತ್ 'ಅಖಿಲಸಂವೇತ್ತುಃ' ಇತಿ ಪ್ರಯೋಗಃ ಸಾಧುರಿತಿ ದ್ರಷ್ಟವ್ಯಮ್ ।

ವಿದ ಜ್ಞಾನೇ ಎಂಬುದು ಸೇಟ್ ಧಾತುವಾಗಿದ್ದರೂ ವಿದ ವಿಚಾರಣೇ ಎಂಬುದು ಅನಿಟ್ ಧಾತುವೆಂದು ಪರಿಗಣಿಸಲಾಗಿದೆ. ಪ್ರಕೃತ ವಿಚಾರಣಾರ್ಥ-ದಲ್ಲಿರುವ ವಿದ್ ಧಾತುವನ್ನೇ ವಿವಕ್ಷಿಸಬೇಕು. ಮತ್ತು ಅನಿಟ್ಕಾರಿಕೆಯಲ್ಲಿ

ವಿನ್ನವಿತ್ತೌ ವಿಚಾರಿತೇ ಎಂಬುದಾಗಿ ವಿಚಾರಣಾರ್ಥದಲ್ಲಿರುವ ವಿದ್ ಧಾತುವನ್ನು ಅನಿಟ್ ಎಂದು ಪ್ರಯೋಗಿಸಲಾಗಿದೆ. ಈ ಧಾತುವನ್ನೇ ವಿವಕ್ಷಿಸಿ ಸಂವೇತ್ತುಃ ಎಂಬ ಪ್ರಯೋಗವನ್ನು ಕೂಡಿಸಬೇಕು. ವಿಚಾರಣಾರ್ಥದಲ್ಲಿರುವ ವಿದ ಧಾತುವನ್ನು ವಿವಕ್ಷಿಸಿದಾಗ ವಿಶೇಷಜ್ಞಾನ ಎಂಬರ್ಥವು ಹೇಗೆ ದೊರೆಯುತ್ತದೆ? ಎಂದರೆ ವಿಚಾರದಿಂದ ವಿಶೇಷಜ್ಞಾನವು ಸಾಧ್ಯವಾಗಿದೆ. ಎಂದರೆ ವಿಶೇಷಜ್ಞಾನವನ್ನು ಪಡೆಯಬೇಕೆಂದರೆ ವಿಚಾರ ಮಾಡಲೇಬೇಕು. ಇಂತಹ ವಿಶೇಷಜ್ಞಾನದಲ್ಲಿ ವಿದ್‌ಧಾತುವಿಗೆ ಲಕ್ಷಣಾವೃತ್ತಿಯನ್ನು ಒಪ್ಪಲೇ-ಬೇಕು. ಆದ್ದರಿಂದ ಅಖಿಲಸಂವೇತ್ತುಃ ಎಂಬ ಶ್ರೀಮದಾಚಾರ್ಯರ ಪ್ರಯೋಗವು ವ್ಯಾಕರಣದ ಪ್ರಕಾರ ಸಾಧುವೇ ಆಗಿದೆ.

## ಸರ್ವಜ್ಞತ್ವದಿಂದ ಅಜ್ಞಾನವಿಲ್ಲವೆಂದು ಹೇಗೆ ಸಾಧಿಸುವಿರಿ? ಅನ್ವಯವ್ಯಾಪ್ತಿಗೆ ದೃಷ್ಟಾಂತವಿಲ್ಲ

ಶ್ರೀನಿವಾಸತೀರ್ಥೀಯ –

**इत्यत्रेति** । परमात्मा अज्ञानाश्रयो न भवति, सर्वज्ञत्वादित्यनुमाने अन्वयव्याप्तौ दृष्टान्तो नास्तीत्यर्थः । कुत इत्यत आह – **परमात्मनेति** । तस्य च पक्षत्वादिति भावः ।

**ಇತ್ಯತ್ರೇತಿ ॥ 'ಪರಮಾತ್ಮಾ ಅಜ್ಞಾನಾಶ್ರಯೋ ನ ಭವತಿ, ಸರ್ವಜ್ಞತ್ವಾತ್' ಇತ್ಯನುಮಾನೇ ಅನ್ವಯವ್ಯಾಪ್ತೌ ದೃಷ್ಟಾಂತೋ ನಾಸ್ತೀತ್ಯರ್ಥಃ । ಕುತಃ? ಇತ್ಯತ ಆಹ – ಪರಮಾತ್ಮನಾ ಇತಿ ॥ ತಸ್ಯ ಚ ಪಕ್ಷತ್ವಾದಿತಿ ಭಾವಃ ।**

'ಅಜ್ಞತಾಖಿಲಸಂವೇತ್ತುಃ ಘಟತೇ ನ ಕುತಶ್ಚನ' ಎಂಬ ಶ್ರೀಮದಾ- ಚಾರ್ಯರ ವಾಕ್ಯದಿಂದ ತಿಳಿಯುವ ಅನುಮಾನ ಹೀಗಿದೆ – 'ಪರಮಾತ್ಮಾ ಅಜ್ಞಾನಾಶ್ರಯೋ ನ ಭವತಿ, ಸರ್ವಜ್ಞತ್ವಾತ್' 'ಸರ್ವಜ್ಞನಾದುದರಿಂದ ಪರಮಾತ್ಮನು ಅಜ್ಞಾನಕ್ಕೆ ಆಶ್ರಯನು ಆಗುವುದಿಲ್ಲ' ಎಂದು. ಈ ಅನುಮಾನದಲ್ಲಿ 'ಯತ್ರ ಯತ್ರ ಸರ್ವಜ್ಞತ್ವಂ ತತ್ರ ತತ್ರ

ಅಜ್ಞಾನಾಶ್ರಯಾಭಾವಃ' ಎಂಬ ಅನ್ವಯವ್ಯಾಪ್ತಿಯನ್ನು ವಿವಕ್ಷಿಸುವುದಾದಲ್ಲಿ ದೃಷ್ಟಾಂತವೇ ಇರುವುದಿಲ್ಲ. ಯಾವುದೇ ಅನುಮಾನದಲ್ಲಿ ಅನ್ವಯವ್ಯಾಪ್ತಿಯನ್ನು ಹೇಳಿದಾಗ ದೃಷ್ಟಾಂತವು ಇರಲೇಬೇಕು. ಪ್ರಕೃತ ಈ ಅನುಮಾನದಲ್ಲಿ ದೃಷ್ಟಾಂತವು ಸಿಗುತ್ತಿಲ್ಲ ಎಂಬುದನ್ನು 'ಪರಮಾತ್ಮನಾ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ವ್ಯಾಪ್ತಿಗೆ ದೃಷ್ಟಾಂತವನ್ನು ಹೇಳುವುದಿದ್ದರೆ ಪರಮಾತ್ಮನನ್ನೇ ಹೇಳಬೇಕು. ಆದರೆ ಪರಮಾತ್ಮನು ಪಕ್ಷದಲ್ಲಿ ಸೇರಿರುವುದರಿಂದ ಪಕ್ಷಾತಿರಿಕ್ತವಾದದ್ದೇ ದೃಷ್ಟಾಂತವಾಗಬೇಕಾದ್ದರಿಂದ ದೃಷ್ಟಾಂತವಿರುವುದಿಲ್ಲ ಎಂದು ಅಭಿಪ್ರಾಯ.

## ಬ್ರಹ್ಮಾತಿರಿಕ್ತವಾದ ಅಜ್ಞಾನಾಶ್ರಯವೇ ಇಲ್ಲ

ಶ್ರೀನಿವಾಸತೀರ್ಥೀಯ –

**यत्राज्ञानाश्रयत्वं तत्र सर्वज्ञत्वाभाव इति व्यतिरेकव्याप्तावपि दृष्टान्तो नास्ति । कुत इत्यत आह – अज्ञानाश्रयस्येति ॥ अन्यस्येति । परमात्मातिरिक्तस्येत्यर्थः ।**

**'ಯತ್ರ ಅಜ್ಞಾನಾಶ್ರಯತ್ವಂ ತತ್ರ ಸರ್ವಜ್ಞತ್ವಾಭಾವಃ' ಇತಿ ವ್ಯತಿರೇಕ-ವ್ಯಾಪ್ತಾವಪಿ ದೃಷ್ಟಾಂತೋ ನಾಸ್ತಿ । ಕುತಃ? ಇತ್ಯತ ಆಹ – ಅಜ್ಞಾನಾ-ಶ್ರಯಸ್ಯೇತಿ ॥ ಅನ್ಯಸ್ಯೇತಿ ॥ 'ಪರಮಾತ್ಮಾತಿರಿಕ್ತಸ್ಯ' ಇತ್ಯರ್ಥಃ ।**

ಅನುಮಾನದಲ್ಲಿ ಅನ್ವಯವ್ಯಾಪ್ತಿಯನ್ನು ಹೇಳಲು ಸಾಧ್ಯವಾಗದಿದ್ದರೂ ವ್ಯತಿರೇಕ-ವ್ಯಾಪ್ತಿಯನ್ನು ಹೇಳಬಹುದು. 'ಯತ್ರ ಅಜ್ಞಾನಾಶ್ರಯತ್ವಂ ತತ್ರ ಸರ್ವಜ್ಞತ್ವಾಭಾವಃ' 'ಎಲ್ಲಿ ಸಾಧ್ಯಾಭಾವವಿರುತ್ತದೋ ಅಲ್ಲಿ ಹೇತ್ವಭಾವವಿರುತ್ತದೆ' ಎಂಬ ವ್ಯತಿರೇಕವ್ಯಾಪ್ತಿ-ಯನ್ನು ಹೇಳಬಹುದಲ್ಲವೇ? ಎಂದರೆ ಇದಕ್ಕೂ ಕೂಡ ದೃಷ್ಟಾಂತವಿರುವುದಿಲ್ಲ. ಏಕೆ? ಎಂಬುದನ್ನು 'ಅಜ್ಞಾನಾಶ್ರಯಸ್ಯ' ಎಂಬ ವಾಕ್ಯದಿಂದ ಸಮರ್ಥಿಸಿದ್ದಾರೆ.

'ಅನ್ಯಸ್ಯ' ಎಂದರೆ 'ಪರಮಾತ್ಮನಿಗಿಂತ ಅತಿರಿಕ್ತವಾದ ಮತ್ತೊಂದು ಪದಾರ್ಥವು ಅಜ್ಞಾನಕ್ಕೆ ಆಶ್ರಯವಾಗಿದೆ ಎಂಬುದನ್ನು ಅದ್ವೈತಿಯು ಒಪ್ಪಿರುವುದಿಲ್ಲ ಎಂದು ಅಭಿಪ್ರಾಯ.

## ವ್ಯತಿರೇಕವ್ಯಾಪ್ತಿಗೆ ದೃಷ್ಟಾಂತವಿಲ್ಲ

ಶ್ರೀನಿವಾಸತೀರ್ಥೀಯ –

**जडस्य जीवस्य च अज्ञानकल्पितत्वेनाज्ञानाश्रयत्वायोगात् ।**

**ಜಡಸ್ಯ ಜೀವಸ್ಯ ಚ ಅಜ್ಞಾನಕಲ್ಪಿತತ್ವೇನ ಅಜ್ಞಾನಾಶ್ರಯತ್ವಾಯೋಗಾತ್ ।**

ಈ ವ್ಯತಿರೇಕವ್ಯಾಪ್ತಿಗೆ ದೃಷ್ಟಾಂತವನ್ನು ಅದ್ವೈತಸಿದ್ಧಾಂತದ ಪ್ರಕಾರ ಹುಡುಕಲು ಸಾಧ್ಯವಾಗುವುದಿಲ್ಲ. ಏಕೆಂದರೆ ಜಡಪದಾರ್ಥಗಳು ಹಾಗೂ ಜೀವರು ಅಜ್ಞಾನಕಲ್ಪಿತ-ರಾದ್ದರಿಂದ ಅಜ್ಞಾನಕ್ಕೆ ಆಶ್ರಯರಾಗುವುದಿಲ್ಲ. ಪರಮಾತ್ಮನನ್ನೇ ಅಜ್ಞಾನಾಶ್ರಯನೆಂದು ಹೇಳಬೇಕು. ಆದರೆ ಅವನು ಪಕ್ಷದಲ್ಲಿ ಸೇರಿರುವುದರಿಂದ ಪುನಃ ವ್ಯತಿರೇಕವ್ಯಾಪ್ತಿಗೂ ಕೂಡ ದೃಷ್ಟಾಂತವಿರುವುದಿಲ್ಲ ಎಂಬ ದೋಷವು ಬಂದೇ ಬರುತ್ತದೆ.

## ಅಜ್ಞಾನವಿರುವುದು ಬ್ರಹ್ಮನಲ್ಲಿ ಮಾತ್ರ

ಶ್ರೀನಿವಾಸತೀರ್ಥೀಯ –

**यथोक्तम् ।**

**''आश्रयत्वविषयत्वभागिनी निर्विशेषचितिरेव केवला ।**
**पूर्वसिद्धतमसो हि पश्चिमो नाश्रयो भवति नापि गोचरः'' । इति ।**

**ಯಥೋಕ್ತಮ್ –**

**ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।**
**ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥**
**ಇತಿ ।**

ಅಜ್ಞಾನವು ಜೀವದಲ್ಲಾಗಲೀ, ಜಡಪದಾರ್ಥದಲ್ಲಾಗಲೀ ಇರಲು ಸಾಧ್ಯವಿಲ್ಲ; ಪರಬ್ರಹ್ಮನಲ್ಲೇ ಇರುತ್ತದೆನ್ನಲು ಅದ್ವೈತಿಗಳು ಹೇಳುವ ಕಾರಿಕೆ ಹೀಗಿದೆ –

ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।
ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥

ಮೊದಲೇ ಸಿದ್ಧವಾಗಿರುವ ನಿರ್ವಿಶೇಷಚೈತನ್ಯವೇ ಆಶ್ರಯವಾಗುತ್ತದೆ. ಹಾಗೂ ವಿಷಯವಾಗುತ್ತದೆ. ಅನಂತರ ಹುಟ್ಟಿರುವ ಜೀವ ಮತ್ತು ಜಡಪದಾರ್ಥಗಳು ವಿಷಯರೂ ಆಗುವುದಿಲ್ಲ. ಆಶ್ರಯರೂ ಆಗುವುದಿಲ್ಲ.

## ಜೀವನಲ್ಲಿ ಅಜ್ಞಾನವೆಂದರೆ ಅನ್ಯೋನ್ಯಾಶ್ರಯದೋಷ

ಶ್ರೀನಿವಾಸತೀರ್ಥೀಯ –

**तथाचाज्ञानसिद्धौ तत्कल्पितजीवादिसिद्धिः । तत्सिद्धौ च तदाश्रिताज्ञानसिद्धिरित्यन्योन्याश्रयादिति भावः ।**

**ತಥಾ ಚ 'ಅಜ್ಞಾನಸಿದ್ಧೌ ತತ್ಕಲ್ಪಿತಜೀವಾದಿಸಿದ್ಧಿಃ । ತತ್ಸಿದ್ಧೌ ಚ ತದಾಶ್ರಿತಾಜ್ಞಾನಸಿದ್ಧಿಃ' ಇತ್ಯನ್ಯೋನ್ಯಾಶ್ರಯಾದಿತಿ ಭಾವಃ ।**

ಆದ್ದರಿಂದ ಅಜ್ಞಾನವು ಸಿದ್ಧವಾದರೆ ಅಜ್ಞಾನದಿಂದ ಕಲ್ಪಿತರಾದ ಜೀವ ಹಾಗೂ ಜಡಪದಾರ್ಥಗಳು ಸಿದ್ಧವಾಗುತ್ತವೆ. ಜೀವ ಜಡಪದಾರ್ಥಗಳು ಸಿದ್ಧವಾದರೆ ಅವರಲ್ಲಿ ಆಶ್ರಿತವಾಗಿದೆ ಎಂಬ ಕಾರಣದಿಂದ ಅಜ್ಞಾನವು ಸಿದ್ಧವಾಗುತ್ತದೆ. ಅಜ್ಞಾನಸಿದ್ಧವಾಗದೇ ಜೀವ ಜಡಪದಾರ್ಥಗಳು ಸಿದ್ಧವಾಗುವುದಿಲ್ಲ. ಜೀವ ಜಡಪದಾರ್ಥಗಳು ಸಿದ್ಧವಾಗದೇ ಅಜ್ಞಾನವು ಸಿದ್ಧವಾಗುವುದಿಲ್ಲ. ಹೀಗೆ ಪರಸ್ಪರ ಒಂದನ್ನೊಂದು ಆಶ್ರಯಿಸಿರುವುದರಿಂದ ಅನ್ಯೋನ್ಯಾಶ್ರಯದೋಷವು ಬರುತ್ತದೆ.

## ವ್ಯಾಪ್ತಿಜ್ಞಾನ ಹುಟ್ಟದಿದ್ದರೆ ಅನುಮಾನ ಹೇಗೆ?

ಶ್ರೀನಿವಾಸತೀರ್ಥೀಯ –

**तत्कथमिति** । तथाच दृष्टान्ताभावेन व्याप्तिग्रहणायोगात् व्याप्तिग्रहणसापेक्षप्रमितिसाधकत्वाभावादनुमानं विरुद्धमिति भावः ।

**ತತ್ಕಥಮಿತಿ ॥ ತಥಾ ಚ ದೃಷ್ಟಾಂತಾಭಾವೇನ ವ್ಯಾಪ್ತಿಗ್ರಹಣಾಯೋಗಾತ್ ವ್ಯಾಪ್ತಿಗ್ರಹಣಸಾಪೇಕ್ಷಪ್ರಮಿತಿಸಾಧಕತ್ವಾಭಾವಾತ್ ಅನುಮಾನಂ ವಿರುದ್ಧಮಿತಿ ಭಾವಃ ।**

ಹೀಗೆ ಅನುಮಾನದಿಂದ ಪರಮಾತ್ಮನಲ್ಲಿ ಸರ್ವಜ್ಞತ್ವವನ್ನು ಸಾಧಿಸಲು ಯಾವುದೇ ದೃಷ್ಟಾಂತವಿರುವುದಿಲ್ಲ. ಆದ್ದರಿಂದ ವ್ಯಾಪ್ತಿಜ್ಞಾನವೇ ಹುಟ್ಟುವುದಿಲ್ಲ. ವ್ಯಾಪ್ತಿಜ್ಞಾನದ ಅಧೀನವಾದ ಸಾಧ್ಯಪ್ರಮಿತಿಸಾಧಕತ್ವವು ಅನುಮಾನದಲ್ಲಿ ಬರುವುದಿಲ್ಲ. ಆದ್ದರಿಂದ ಅನುಮಾನವು ವಿರುದ್ಧವಾಗಿದೆ ಎಂದು ತಿಳಿಯಬೇಕು.

## ಸಾಧ್ಯಪ್ರಮಿತಿಗೆ ಯಾವುದು ಸಾಧಕ?

ಶ್ರೀನಿವಾಸತೀರ್ಥೀಯ –

**'व्याप्तिग्रहणसापेक्षं प्रमितेः साधनं विदुः । अनुमानम्' इति वचनादिति ज्ञातव्यम् ।।**

**'ವ್ಯಾಪ್ತಿಗ್ರಹಣಸಾಪೇಕ್ಷಂ ಪ್ರಮಿತೇಃ ಸಾಧನಂ ವಿದುಃ। ಅನುಮಾನಮ್' ಇತಿ ವಚನಾದಿತಿ ಜ್ಞಾತವ್ಯಮ್ ।**

'ವ್ಯಾಪ್ತಿಗ್ರಹಣಸಾಪೇಕ್ಷಂ ಪ್ರಮಿತೇಃ ಸಾಧನಂ ವಿದುಃ । ಅನುಮಾನಮ್' ವ್ಯಾಪ್ತಿಜ್ಞಾನವನ್ನು ಅಪೇಕ್ಷಿಸಿರುವ ಅನುಮಾನವು ಸಾಧ್ಯಪ್ರಮಿತಿಗೆ ಸಾಧನವಾಗುತ್ತದೆ ಎಂಬ ವಚನವೇ ಈ ವಿಷಯದಲ್ಲಿ ಆಧಾರವಾಗಿದೆ. ಪ್ರಕೃತ ವ್ಯಾಪ್ತಿಗ್ರಹಣವಾಗದ ಕಾರಣ ಅನುಮಾನವು ಈಶ್ವರನು ಸರ್ವಜ್ಞನಾಗಿದ್ದಾನೆ ಎಂಬ ಪ್ರಮಿತಿಗೆ ಸಾಧಕವಾಗು-ವುದಿಲ್ಲ.

## ಸಾಮಾನ್ಯಮುಖವ್ಯಾಪ್ತಿಯಿಂದ ಅದ್ವೈತನಿರಾಸ

ಶ್ರೀನಿವಾಸತೀರ್ಥೀಯ –

**सामान्यव्याप्तेरिति** । सामान्यव्याप्तौ च घटादिज्ञानवान् देवदत्तो दृष्टान्तः । तथा च सामान्यव्याप्तिमूलकमिदं सामान्यतो दृष्टा-नुमानमिति भावः ।

**ಸಾಮಾನ್ಯವ್ಯಾಪ್ತೇರಿತಿ ॥ ಸಾಮಾನ್ಯವ್ಯಾಪ್ತೌ ಚ ಘಟಾದಿಜ್ಞಾನವಾನ್ ದೇವದತ್ತೋ ದೃಷ್ಟಾಂತಃ । ತಥಾ ಚ ಸಾಮಾನ್ಯವ್ಯಾಪ್ತಿಮೂಲಕಮಿದಂ ಸಾಮಾನ್ಯತೋ ದೃಷ್ಟಾನುಮಾನಮಿತಿ ಭಾವಃ।**

'ಪರಮಾತ್ಮಾ ಅಜ್ಞಾನಾಶ್ರಯೋ ನ ಭವತಿ ಸರ್ವಜ್ಞತ್ವಾತ್' ಎಂಬ ಅನುಮಾನದಲ್ಲಿ ಅನ್ವಯವ್ಯಾಪ್ತಿಯನ್ನಾಗಲೀ ವ್ಯತಿರೇಕವ್ಯಾಪ್ತಿಯನ್ನಾಗಲೀ ನಾವು ವಿವಕ್ಷಿಸುವುದಿಲ್ಲ. ಸಾಮಾನ್ಯಮುಖಿವ್ಯಾಪ್ತಿಯನ್ನು ವಿವಕ್ಷಿಸುತ್ತೇವೆ. ಅದು ಹೀಗೆ – 'ಯಃ ಯತ್ರ ಜ್ಞಾನವಾನ್ ನಾಸೌ ತತ್ರ ಅಜ್ಞಾನವಾನ್' ಎಂದು. ದೇವದತ್ತನಿಗೆ ಘಟವಿಷಯದಲ್ಲಿ ಜ್ಞಾನವಿದ್ದಾಗ, ಅದೇ ಘಟದ ವಿಷಯದಲ್ಲಿ ಅಜ್ಞಾನವಿರಲು ಸಾಧ್ಯವಿಲ್ಲವೆಂದು ದೃಷ್ಟಾಂತ.

## ವೃತ್ತಿಜ್ಞಾನವೂ ಪ್ರಮಾಣ

**ಶ್ರೀನಿವಾಸತೀರ್ಥೀಯ –**

**अनुमाने विरुद्धत्वमाशङ्कते – नन्वित्यादिना ।। प्रमाण इति । अन्तःकरणवृत्त्येत्यर्थः । तस्या एव तन्मते प्रमाणत्वेन व्यवहारादिति ज्ञातव्यम् ।।**

**ಅನುಮಾನೇ ವಿರುದ್ಧತ್ವಮಾಶಂಕತೇ – ನನು ಇತ್ಯಾದಿನಾ । ಪ್ರಮಾಣ ಇತಿ ॥ ಅಂತಃಕರಣವೃತ್ತ್ಯಾ ಇತ್ಯರ್ಥಃ । ತಸ್ಯಾ ಏವ ತನ್ಮತೇ ಪ್ರಮಾಣತ್ವೇನ ವ್ಯವಹಾರಾದಿತಿ ಜ್ಞಾತವ್ಯಮ್ ।**

ಅನುಮಾನದಲ್ಲಿ ವಿರೋಧ ಎಂಬ ದೋಷವನ್ನು''ನನು'' ಇತ್ಯಾದಿ ಗ್ರಂಥದಿಂದ ಆಕ್ಷೇಪಿಸುತ್ತಿದ್ದಾನೆ. ಪ್ರಮಾಣತಃ ಎಂದರೆ ಅಂತಃಕರಣವೃತ್ತಿರೂಪವಾದ ಪ್ರಮಾಣದಿಂದ ಎಂದರ್ಥ. ಏಕೆಂದರೆ ಅದ್ವೈತಮತದಲ್ಲಿ ಅಂತಃಕರಣವೃತ್ತಿಯನ್ನೇ ಪ್ರಮಾಣವೆಂದು ವ್ಯವಹರಿಸುತ್ತಾರೆ.

## ಬ್ರಹ್ಮನು ಕೂಟಸ್ಥ

ಶ್ರೀನಿವಾಸತೀರ್ಥೀಯ –

**भ्रान्त्या वेति** । तथाच सर्वविषयकं ज्ञानं भ्रमरूपमित्याशयः । प्रमाणतः सर्वज्ञताङ्गीकारे परमात्मनः प्रमातृत्वं प्राप्तम् । तच्चाज्ञान-सापेक्षमित्याह – **कूटस्थस्येति** । निर्विकारस्येत्यर्थः । कूटम् अव्याकृताकाशः । "कूटं खं विदलं व्योम सन्धिराकाश उच्यते" इत्यभिधानात् । तद्वत् स्थितः कूटस्थः । सादृश्यं च निर्विकारत्वेनेति कूटस्थशब्देन निर्विकारत्वं लभ्यत इति ज्ञातव्यम् ।

**ಭ್ರಾಂತ್ಯಾ ವೇತಿ ॥ ತಥಾ ಚ ಸರ್ವವಿಷಯಕಂ ಜ್ಞಾನಂ ಭ್ರಮರೂಪಂ ಇತ್ಯಾಶಯಃ । ಪ್ರಮಾಣತಃ ಸರ್ವಜ್ಞತಾಂಗೀಕಾರೇ ಪರಮಾತ್ಮನಃ ಪ್ರಮಾ-ತೃತ್ವಂ ಪ್ರಾಪ್ತಮ್ । ತಚ್ಚಾಜ್ಞಾನಸಾಪೇಕ್ಷಮಿತ್ಯಾಹ – ಕೂಟಸ್ಥಮಿತಿ ॥ 'ನಿರ್ವಿಕಾರಸ್ಯ' ಇತ್ಯರ್ಥಃ । ಕೂಟಮ್ = ಅವ್ಯಾಕೃತಾಕಾಶಃ । 'ಕೂಟಂ ಖಂ ವಿದಲಂ ವ್ಯೋಮ ಸಂಧಿರಾಕಾಶ ಉಚ್ಯತೇ' ಇತ್ಯಭಿಧಾನಾತ್ । ತದ್ವತ್ ಸ್ಥಿತಃ ಕೂಟಸ್ಥಃ । ಸಾದೃಶ್ಯಂ ಚ ನಿರ್ವಿಕಾರತ್ವೇನ ಇತಿ ಕೂಟಸ್ಥಶಬ್ದೇನ ನಿರ್ವಿಕಾರತ್ವಂ ಲಭ್ಯತ ಇತಿ ಜ್ಞಾತವ್ಯಮ್ ।**

ಭ್ರಾಂತಿ ಎಂಬುದರ ಅಭಿಪ್ರಾಯ ಹೀಗಿದೆ – ಭ್ರಾಂತಿಯಿಂದ ಬ್ರಹ್ಮನು ಎಲ್ಲವನ್ನೂ ತಿಳಿಯುತ್ತಾನೆ ಎಂದು ಹೇಳಿದಾಗ ಅವನಿಗೆ ಬರುವ ಸರ್ವವಿಷಯಕಜ್ಞಾನವು ಭ್ರಮರೂಪವಾಗಿದೆ ಎಂದು.

ಪ್ರಮಾಣತಃ = ಅಂತಃಕರಣವೃತ್ತಿಯಿಂದ ಸರ್ವಜ್ಞನಾಗಿದ್ದಾನೆ ಎಂದು ಅಂಗೀಕರಿಸಿ -ದರೆ ಪರಮಾತ್ಮನು ಪ್ರಮಾ ಉಳ್ಳವನು ಎಂದೆನಿಸುತ್ತಾನೆ. ಪ್ರಮಾತೃತ್ವ ಎಂಬ ಧರ್ಮವು ಅವನಲ್ಲಿ ಬಂದಂತಾಗುತ್ತದೆ. ನಿರ್ವಿಕಾರನಾದ ಬ್ರಹ್ಮನಲ್ಲಿ ಪ್ರಮಾತೃತ್ವ ಎಂಬ ಧರ್ಮವನ್ನು ಹೇಳುವ ಮೂಲಕ ವಿಕಾರವನ್ನು ಒಪ್ಪಬೇಕೆಂದರೆ ಅಜ್ಞಾನವನ್ನು ಅವನಲ್ಲಿ

ಒಪ್ಪಲೇಬೇಕಾಗುತ್ತದೆಂಬುದನ್ನು 'ಕೂಟಸ್ಥಸ್ಯ' ಎಂಬ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ. 'ಕೂಟಸ್ಥ' ಎಂಬ ಶಬ್ದಕ್ಕೆ 'ನಿರ್ವಿಕಾರ' ಎಂದರ್ಥ. ಏಕೆಂದರೆ ಕೂಟಶಬ್ದಕ್ಕೆ ಅವ್ಯಾಕೃತಾಕಾಶ ಎಂಬರ್ಥವು ಕೋಶದಲ್ಲಿ ಪ್ರಸಿದ್ಧವಾಗಿದೆ. 'ಕೂಟಂ ಖಂ ವಿದಲಂ ವ್ಯೋಮ ಸಂಧಿರಾಕಾಶ ಉಚ್ಯತೇ' ಎಂದು. ಅವ್ಯಾಕೃತಾಕಾಶಕ್ಕೆ ಹೇಗೆ ಯಾವುದೇ ವಿಕಾರವಿರುವುದಿಲ್ಲವೋ ಅದರಂತೆ ಬ್ರಹ್ಮನಿಗೂ ಯಾವುದೇ ವಿಕಾರವಿರುವುದಿಲ್ಲ. ಅವ್ಯಾಕೃತಾಕಾಶಕ್ಕೂ ಬ್ರಹ್ಮನಿಗೂ 'ನಿರ್ವಿಕಾರತ್ವ' ಎಂಬ ಅಂಶದಲ್ಲಿ ಸಾದೃಶ್ಯವಿದೆ. ಹೀಗೆ 'ಕೂಟವತ್ ತಿಷ್ಠತಿ ಇತಿ ಕೂಟಸ್ಥಃ' ಎಂಬ ವ್ಯುತ್ಪತ್ತಿಯಿಂದ ಕೂಟಸ್ಥಶಬ್ದದಿಂದ ನಿರ್ವಿಕಾರತ್ವವನ್ನು ತಿಳಿಯಬೇಕು.

## ಅಧಿಷ್ಠಾನಜ್ಞಾನವಿಲ್ಲದಾಗ ಭ್ರಾಂತಿ

ಶ್ರೀನಿವಾಸತೀರ್ಥೀಯ –

**द्वितीयेऽप्यज्ञानमावश्यकमित्याह – भ्रान्तेश्चेति ।। अज्ञानेति । अधिष्ठानाज्ञानविशेषादर्शनकार्यत्वादित्यर्थः ।**

**ದ್ವಿತೀಯೇಽಪ್ಯಜ್ಞಾನಮಾವಶ್ಯಕಮಿತ್ಯಾಹ – ಭ್ರಾಂತೇಶ್ಚೇತಿ ॥ ಅಜ್ಞಾನೇತಿ ॥ 'ಅಧಿಷ್ಠಾನಾಜ್ಞಾನವಿಶೇಷಾದರ್ಶನಕಾರ್ಯತ್ವಾತ್' ಇತ್ಯರ್ಥಃ।**

'ಭ್ರಾಂತಿಯಿಂದ ಎಲ್ಲವನ್ನೂ ತಿಳಿದಿದ್ದಾನೆ' ಎಂಬ ಎರಡನೆಯ ಪಕ್ಷದಲ್ಲಿಯೂ ಬ್ರಹ್ಮನಲ್ಲಿ ಅಜ್ಞಾನವನ್ನು ಒಪ್ಪುವುದು ಅನಿವಾರ್ಯವೆಂದು 'ಭ್ರಾಂತೇಶ್ಚ' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಅಜ್ಞಾನಕಾರ್ಯತ್ವಾತ್ ಎಂದರೆ 'ಅಧಿಷ್ಠಾನದ ಅಜ್ಞಾನದ ವಿಶೇಷದ ಅದರ್ಶನಕಾರ್ಯವಾದ್ದರಿಂದ' ಎಂದರ್ಥ. ಅಧಿಷ್ಠಾನದ ವಿಶೇಷಜ್ಞಾನವಿಲ್ಲದಿದ್ದರೆ ಮಾತ್ರ ಭ್ರಾಂತಿಯು ಹುಟ್ಟುತ್ತದೆ. ಇದು ಲೋಕದಲ್ಲಿ ಕಂಡಿರುವ ನಿಯಮ. ಆದರೆ ಪರಮಾತ್ಮನಿಗೆ ಅಧಿಷ್ಠಾನದ ವಿಶೇಷಜ್ಞಾನವಿರುವುದೇ ಮತ್ತೊಂದು ಭ್ರಾಂತಿ ಹುಟ್ಟಲು ಕಾರಣವಾಗಿದೆ ಎಂದು ತಿಳಿಯಬೇಕು. (ಮಂದಾರಮಂಜರಿಯಲ್ಲಿ ಇದರ ಬಗ್ಗೆ ವಿವರ ಇದೆ).

## ಅಸಂಗನು ಸರ್ವಜ್ಞಸ್ವರೂಪ

ಶ್ರೀನಿವಾಸತೀರ್ಥೀಯ –

तृतीयेऽप्यज्ञानं स्वीकार्यमित्याह – **स्वरूपप्रज्ञायाश्चेति** । अज्ञानमन्तरेणेत्यर्थः । सङ्गतिः सम्बन्धः । असङ्गत्वात् प्रज्ञायाः । **असङ्गो हीति** । परमात्मनोऽसङ्गत्वे श्रुतिसिद्धे सति तत्स्वरूपभूतप्रज्ञाया अप्यसङ्गत्वं लब्धमेवेत्यर्थः ।

**ತೃತೀಯೇऽಪಿ ಅಜ್ಞಾನಂ ಸ್ವೀಕಾರ್ಯಮ್, ಇತ್ಯಾಹ – ಸ್ವರೂಪಪ್ರಜ್ಞಾಯಾಶ್ಚೇತಿ ॥ 'ಅಜ್ಞಾನಮಂತರೇಣ' ಇತ್ಯರ್ಥಃ । ಸಂಗತಿಃ = ಸಂಬಂಧಃ । ಅಸಂಗತ್ವಾತ್ ಪ್ರಜ್ಞಾಯಾಃ । ಪರಮಾತ್ಮನೋऽಸಂಗತ್ವೇ ಶ್ರುತಿಸಿದ್ಧೇ ಸತಿ ತತ್ಸ್ವರೂಪಭೂತಪ್ರಜ್ಞಾಯಾ ಅಪಿ ಅಸಂಗತ್ವಂ ಲಬ್ಧಮೇವೇತ್ಯರ್ಥಃ।**

ಸ್ವಾಭಾವಿಕವಾದ ಜ್ಞಾನದಿಂದ ಸಾರ್ವಜ್ಞ್ಯವನ್ನು ಒಪ್ಪುವುದಾದರೂ ಅಜ್ಞಾನವು ಅನಿವಾರ್ಯವೆಂಬುದನ್ನು 'ಸ್ವರೂಪಪ್ರಜ್ಞಾಯಾಶ್ಚ' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. 'ಅಜ್ಞಾನಮಂತರೇಣ' ಎಂದು ಅನ್ವಯ. ಸಂಗತಿಃ ಎಂದರೆ ಸಂಬಂಧ ಎಂದರ್ಥ. ಅಸಂಗತ್ವಾತ್ ಎಂದರೆ ಭಗವಂತನ ಪ್ರಜ್ಞೆಯು ಅಸಂಗವಾಗಿದೆ ಎಂದರ್ಥ. ಪರಮಾತ್ಮನು ಅಸಂಗನಾಗಿದ್ದಾನೆಂದು ಶ್ರುತಿಸಿದ್ಧವಾದ ಮೇಲೆ ಅವನ ಸ್ವರೂಪಭೂತ-ವಾದ ಪ್ರಜ್ಞೆಯೂ ಕೂಡ ಅಸಂಗವೇ ಆಗಿದೆ ಎಂಬರ್ಥವು ದೊರೆಯುತ್ತದೆ.

## ಅದ್ವೈತಿಯ ಮಾತು

ಶ್ರೀನಿವಾಸತೀರ್ಥೀಯ –

**प्रमाणतः सर्वज्ञत्वं स्वभावसिद्धप्रज्ञया वेति प्रकारद्वयम् अज्ञान-सापेक्षमित्येतत्स्वरूपतः प्रमाणैर्वा सर्वज्ञत्वं द्विधा स्थितम् । तच्चोभयं विनाऽविद्या सम्बन्धं नैव सिध्यतीति तदीयवचनसिद्धम् ।**

**ಪ್ರಮಾಣತಃ ಸರ್ವಜ್ಞತ್ವಂ ಸ್ವಭಾವಸಿದ್ಧಪ್ರಜ್ಞಯಾ ವಾ ಇತಿ ಪ್ರಕಾರದ್ವಯಮ್ ಅಜ್ಞಾನಸಾಪೇಕ್ಷಮಿತ್ಯೇತತ್ –**

**ಸ್ವರೂಪತಃ ಪ್ರಮಾಣೈರ್ವಾ ಸರ್ವಜ್ಞತ್ವಂ ದ್ವಿಧಾ ಸ್ಥಿತಮ್ । ತಚ್ಚೋಭಯಂ ವಿನಾಽವಿದ್ಯಾಸಂಬಂಧಂ ನೈವ ಸಿದ್ಧ್ಯತಿ'**

**ಇತಿ ತದೀಯವಚನಸಿದ್ಧಮ್ ।**

ಪ್ರಮಾಣತಃ ಸರ್ವಜ್ಞತ್ವವನ್ನಾಗಲೀ ಸ್ವಭಾವಸಿದ್ಧವಾದ ಪ್ರಜ್ಞೆಯಿಂದ ಸರ್ವಜ್ಞತ್ವವನ್ನಾಗಲೀ ಹೇಳಿದಾಗ ಎರಡೂ ಪ್ರಕಾರಗಳಲ್ಲಿಯೂ ಅಜ್ಞಾನವು ಅನಿವಾರ್ಯವಾಗಿದೆ ಎಂಬ ವಿಚಾರವು ಅದ್ವೈತಿಯ ವಾಕ್ಯದಿಂದಲೇ ತಿಳಿಯುತ್ತಿದೆ. ಅದ್ವೈತಿಯ ವಾಕ್ಯ ಹೀಗಿದೆ –

ಸ್ವರೂಪತಃ ಪ್ರಮಾಣೈರ್ವಾ ಸರ್ವಜ್ಞತ್ವಂ ದ್ವಿಧಾ ಸ್ಥಿತಮ್ ।
ತಚ್ಚೋಭಯಂ ವಿನಾಽವಿದ್ಯಾಸಂಬಂಧಂ ನೈವ ಸಿದ್ಧ್ಯತಿ'

ಸ್ವರೂಪತಃ ಮತ್ತು ಪ್ರಮಾಣದಿಂದ ಸರ್ವಜ್ಞತ್ವವನ್ನು ಬ್ರಹ್ಮನಲ್ಲಿ ಹೇಳಬಹುದು. ಈ ಎರಡೂ ಪ್ರಕಾರಗಳು ಅವಿದ್ಯಾಸಂಬಂಧವಿಲ್ಲದೇ ಸರ್ವಥಾ ಸಿದ್ಧವಾಗುವುದಿಲ್ಲ ಎಂದು.

## ಭ್ರಾಂತಿಯಿಂದ ಎಂದರೆ ಅಜ್ಞಾನ ಬೇಕು

ಶ್ರೀನಿವಾಸತೀರ್ಥೀಯ –

**भ्रान्त्या सर्वज्ञत्वमप्यज्ञानसापेक्षमित्येतदपि भ्रान्त्या सर्वज्ञताज्ञानं विना नैव हि सिध्यतीति तद्वाक्यसिद्धमिति ज्ञातव्यम् ।**

**ಭ್ರಾಂತ್ಯಾ ಸರ್ವಜ್ಞತ್ವಮಪಿ ಅಜ್ಞಾನಸಾಪೇಕ್ಷಮಿತ್ಯೇತದಪಿ 'ಭ್ರಾಂತ್ಯಾ ಸರ್ವಜ್ಞತಾಜ್ಞಾನಂ ವಿನಾ ನೈವ ಸಿದ್ಧ್ಯತಿ' ಇತಿ ತದ್ವಾಕ್ಯಸಿದ್ಧಮಿತಿ ಜ್ಞಾತವ್ಯಮ್ ।**

'ಭ್ರಾಂತಿಯಿಂದ ಸರ್ವಜ್ಞತ್ವವೂ ಕೂಡ ಅಜ್ಞಾನಸಾಪೇಕ್ಷಿತವಾಗಿದೆ' ಎಂಬುದು

'ಭ್ರಾಂತ್ಯಾ ಸರ್ವಜ್ಞತಾಜ್ಞಾನಂ ವಿನಾ ನೈವ ಸಿದ್ಧ್ಯತಿ' 'ಭ್ರಾಂತಿಯಿಂದ ಸರ್ವಜ್ಞತ್ವವನ್ನು ಪಡೆಯುವಿಕೆಯೂ ಕೂಡ ಅಜ್ಞಾನವಿಲ್ಲದೇ ಕೂಡೋದಿಲ್ಲ' ಎಂಬ ಅದ್ವೈತಿಯ ವಾಕ್ಯದಿಂದಲೇ ಸಿದ್ಧವಾಗಿದೆ ಎಂದು ತಿಳಿಯಬೇಕು.

## ಅಸಂಗ ಎಂದರೇನು?

ಶ್ರೀನಿವಾಸತೀರ್ಥೀಯ –

नन‍ु स्वरूपज्ञानेनैव परमात्मनः सर्वज्ञताङ्गीकारेऽशेषपदार्थसम्बन्धविरहरूपासङ्गत्वविरोध इत्यत आह – **असङ्गत्वमिति** ।। **तत्कृतेति** । शुभाशुभपदार्थसम्बन्धकृतपुण्यपापरूपफललेपाभाव एवेत्यर्थः ।।

**ನನು ಸ್ವರೂಪಜ್ಞಾನೇನೈವ ಪರಮಾತ್ಮನಃ ಸರ್ವಜ್ಞತಾಂಗೀಕಾರೇ ಅಶೇಷಪದಾರ್ಥಸಂಬಂಧವಿರಹರೂಪಾಸಂಗತ್ವವಿರೋಧ ಇತ್ಯತ ಆಹ – ಅಸಂಗತ್ವಮಿತಿ ॥ ತತ್ಕೃತೇತಿ ॥ ಶುಭಾಶುಭಪದಾರ್ಥಸಂಬಂಧಕೃತಪುಣ್ಯಪಾಪರೂಪಫಲಲೇಪಾಭಾವ ಏವೇತ್ಯರ್ಥಃ।**

ಸ್ವಾಭಾವಿಕವಾದ ಸ್ವರೂಪಜ್ಞಾನದಿಂದಲೇ ಪರಮಾತ್ಮನು ಸರ್ವಜ್ಞನಾಗಿದ್ದಾನೆಂದು ಅಂಗೀಕರಿಸಿದರೆ ಸಕಲಪದಾರ್ಥಗಳ ಸಂಬಂಧವಿಲ್ಲವೆಂಬ ಅಸಂಗತ್ವದಿಂದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅಸಂಗತ್ವಂ ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅಸಂಗೋ ಹ್ಯಯಂ ಪುರುಷಃ' ಎಂಬ ವಾಕ್ಯದ ಅಸಂಗಶಬ್ದಕ್ಕೆ 'ಶುಭಾಶುಭಪದಾರ್ಥಗಳ ಸಂಬಂಧದಿಂದ ಹುಟ್ಟುವ ಪುಣ್ಯಪಾಪಗಳೆಂಬ ಫಲದ ಲೇಪಕ್ಕೆ ಅವಕಾಶವಿಲ್ಲದ' ಎಂದರ್ಥ. ಸಕಲಪದಾರ್ಥಗಳ ಜೊತೆಗೆ ಪರಮಾತ್ಮನು ಸಂಬಂಧವನ್ನು ಹೊಂದಿಲ್ಲ ಎಂದರೆ ಅವುಗಳಿಂದ ಯಾವುದೇ ಪುಣ್ಯಪಾಪಗಳ ಸಂಪರ್ಕವು ಅವನಿಗೆ ಇರುವುದಿಲ್ಲ ಎಂದು ತಿಳಿಯಬೇಕು.

## ಸಂಗವಿಲ್ಲವೆಂದರೆ ವ್ಯಾಹತಿ?

ಶ್ರೀನಿವಾಸತೀರ್ಥೀಯ –

**न तु सम्बन्धविरह इति ।** सम्बन्धविरहरूपत्वे व्याप्तत्व-व्याघातः । युगपत्सर्वपदार्थसम्बन्धित्वस्यैव व्याप्तिपदार्थत्वात् ।

**ನತು ಸಂಬಂಧವಿರಹ ಇತಿ । ಸಂಬಂಧವಿರಹರೂಪತ್ವೇ ವ್ಯಾಪ್ತತ್ವವ್ಯಾಘಾತಃ । ಯುಗಪತ್ಸರ್ವಪದಾರ್ಥಸಂಬಂಧಿತ್ವಸ್ಯೈವ ವ್ಯಾಪ್ತಿಪದಾರ್ಥತ್ವಾತ್ ।**

ಯಾವುದೇ ಪದಾರ್ಥಗಳ ಸಂಪರ್ಕವೇ ಇಲ್ಲವೆಂದು ಹೇಳುವುದಾದರೆ ಪರಮಾತ್ಮನು ವ್ಯಾಪ್ತನಾಗಿದ್ದಾನೆ ಎಂಬುದರಿಂದ ವ್ಯಾಹತಿ ಬರುತ್ತದೆ. ಏಕೆಂದರೆ ಒಟ್ಟಿಗೆ ಸಕಲಪದಾರ್ಥಗಳ ಸಂಬಂಧ ಇರುವಿಕೆಯೇ ವ್ಯಾಪ್ತಿ ಎಂದೆನಿಸಿಕೊಳ್ಳುತ್ತದೆ. ಇಂತಹ ವ್ಯಾಪ್ತಿಯು ಪರಮಾತ್ಮನಲ್ಲಿ ಇರುವುದರಿಂದ ಯಾವುದೇ ಪದಾರ್ಥಗಳ ಸಂಪರ್ಕವೇ ಇಲ್ಲವೆಂದರೆ ತಮ್ಮ ಮಾತಿಗೆ ತಾವೇ ವಿರುದ್ಧವಾಗಿ ಹೇಳಿದಂತಾಗುತ್ತದೆ.

## ಪರಮಾತ್ಮನು ವ್ಯಾಪ್ತನಾಗಿದ್ದಾನೆ

ಶ್ರೀನಿವಾಸತೀರ್ಥೀಯ –

न च परममहत्परिमाणाश्रयत्वं व्याप्तत्वम् । त्वया ब्रह्मणि तदनङ्गीकारात् ।

**ನಚ ಪರಮಮಹತ್ಪರಿಮಾಣಾಶ್ರಯತ್ವಂ ವ್ಯಾಪ್ತತ್ವಮ್ । ತ್ವಯಾ ಬ್ರಹ್ಮಣಿ ತದನಂಗೀಕಾರಾತ್ ।**

ಯುಗಪತ್ ಸರ್ವಸಂಬಂಧಿತ್ವವನ್ನು ವ್ಯಾಪ್ತಿಯೆಂದು ಹೇಳಿದರೆ ವ್ಯಾಹತಿ ದೋಷವು ಬರುತ್ತಿತ್ತು. ಆದರೆ ಪರಮಮಹತ್ಪರಿಮಾಣಾಶ್ರಯತ್ವವನ್ನೇ ವ್ಯಾಪ್ತಿ ಎನ್ನುತ್ತೇವೆ. ಪರಮಾತ್ಮನು ಪರಮಮಹತ್ಪರಿಮಾಣಕ್ಕೆ ಆಶ್ರಯನಾದ್ದರಿಂದ ವ್ಯಾಪ್ತನಾಗಿದ್ದಾನೆ. ಹೀಗೆ ವ್ಯಾಪ್ತಿಯನ್ನು ಒಪ್ಪಿದ ಮಾತ್ರಕ್ಕೆ ಸಕಲ ಪದಾರ್ಥಗಳ ಸಂಪರ್ಕವು ಇರಬೇಕೆಂದೇನು ನಿಯಮವಿರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಪರಮ-

ಮಹತ್ಪರಿಮಾಣಾಶ್ರಯತ್ವ ಎಂಬ ಧರ್ಮವನ್ನು ಬ್ರಹ್ಮನಲ್ಲಿ ಅದ್ವೈತಿಗಳು ಅಂಗೀ-ಕರಿಸಿರುವುದಿಲ್ಲ. ಆದ್ದರಿಂದ ಹೀಗೆ ವ್ಯಾಪ್ತಿಲಕ್ಷಣವನ್ನು ಅದ್ವೈತಿಗಳಿಂದ ಹೇಳಲು ಸಾಧ್ಯವಿಲ್ಲ.

## ಶಶವಿಷಾಣಕ್ಕೂ ಬ್ರಹ್ಮನಿಗೂ ವ್ಯತ್ಯಾಸ ತೋರಿಸಿರಿ

**ಶ್ರೀನಿವಾಸತೀರ್ಥೀಯ –**

**न च देशपरिच्छेदाभावो व्याप्तत्वम् । असत्यतिव्याप्तेः । न च सत्वे सतीति विशेषणीयम् । ब्रह्मणि स्वरूपातिरिक्तसत्ताभावात् । न च सर्वत्र विद्यमानत्वमेव व्याप्तत्वम् । सर्वत्र विद्यमानत्वाङ्गीकारे तत्सम्बन्धस्यावर्जनीयत्वादिति भावः ।**

**ನ ಚ ದೇಶಪರಿಚ್ಛೇದಾಭಾವೋ ವ್ಯಾಪ್ತತ್ವಮ್ । ಅಸತಿ ಅತಿವ್ಯಾಪ್ತೇಃ । ನ ಚ ಸತ್ವೇ ಸತೀತಿ ವಿಶೇಷಣೀಯಮ್ । ಬ್ರಹ್ಮಣಿ ಸ್ವರೂಪಾತಿರಿಕ್ತಸತ್ತಾಭಾವಾತ್ । ನ ಚ ಸರ್ವತ್ರ ವಿದ್ಯಮಾನತ್ವಮೇವ ವ್ಯಾಪ್ತತ್ವಮ್ । ಸರ್ವತ್ರ ವಿದ್ಯಮಾನ-ತ್ವಾಂಗೀಕಾರೇ ತತ್ಸಂಬಂಧಸ್ಯ ಅವರ್ಜನೀಯತ್ವಾದಿತಿ ಭಾವಃ ।**

ಅದ್ವೈತಿಗಳು – ದೇಶಪರಿಚ್ಛೇದದ ಅಭಾವವನ್ನೇ ವ್ಯಾಪ್ತತ್ವವೆನ್ನುತ್ತೇವೆ. ಆದ್ದರಿಂದ ಅಸಂಗ ಎಂಬ ಪದಕ್ಕೆ ಸಂಬಂಧವಿರಹ ಎಂಬರ್ಥವನ್ನೇ ವಿವಕ್ಷಿಸಬಹುದಲ್ಲವೇ?

ತತ್ವವಾದಿಗಳು – ದೇಶಪರಿಚ್ಛೇದಾಭಾವವನ್ನು ವ್ಯಾಪ್ತತ್ವ ಎಂದು ವಿವಕ್ಷಿಸಿದರೆ ಶಶವಿಷಾಣದಲ್ಲಿ ಅತಿವ್ಯಾಪ್ತಿ ಬರುತ್ತದೆ. ಶಶವಿಷಾಣಕ್ಕೂ ಕೂಡ ದೇಶಪರಿಚ್ಛೇದವು ಇರುವುದಿಲ್ಲ.

ಅದ್ವೈತಿಗಳು – ಕೇವಲ ದೇಶಪರಿಚ್ಛೇದಾಭಾವವನ್ನೇ ವ್ಯಾಪ್ತತ್ವ ಎನ್ನುವುದಿಲ್ಲ. ಸತ್ವೇ ಸತಿ ದೇಶಪರಿಚ್ಛೇದಾಭಾವಃ ಎಂದು ಸತ್ವವನ್ನು ವಿಶೇಷಣವನ್ನಾಗಿ ನೀಡುತ್ತೇವೆ. ಶಶವಿಷಾಣದಲ್ಲಿ ದೇಶಪರಿಚ್ಛೇದಾಭಾವವು ಇದ್ದರೂ ಸತ್ವವೆಂಬ ವಿಶೇಷಣವು ಇಲ್ಲದ ಕಾರಣ ವಿಶಿಷ್ಟವೂ ಕೂಡ ಇರುವುದಿಲ್ಲ.

ತತ್ವವಾದಿಗಳು – ನಿಮ್ಮ ಸಿದ್ಧಾಂತದಲ್ಲಿ ಸತ್ವವು ಬ್ರಹ್ಮನಲ್ಲೂ ಕೂಡ ಇಲ್ಲ. ಬ್ರಹ್ಮ-ಸ್ವರೂಪಭೂತವಾದ ಸತ್ತಾ ಇದೆ ಹೊರತು ತದತಿರಿಕ್ತವಾದ ಸತ್ವ(?) ಆದ್ದರಿಂದ ಶಶವಿಷಾಣದಲ್ಲಿ ಸತ್ವವು ಹೇಗೆ ಇಲ್ಲವೋ ಅದರಂತೆ ಬ್ರಹ್ಮಲ್ಲೂ ಕೂಡ ಸತ್ವವು ಇರುವುದಿಲ್ಲ.

ಅದ್ವೈತಿಗಳು – ಹಾಗಾದರೆ ಸರ್ವತ್ರ ವಿದ್ಯಮಾನತ್ವಂ ವ್ಯಾಪ್ತತ್ವಂ ಎಂದು ಹೇಳು-ತ್ತೇವೆ. ಬ್ರಹ್ಮನು ಎಲ್ಲೆಡೆಯೂ ಇರುವುದರಿಂದ ವ್ಯಾಪ್ತನೆಂದು ಹೇಳಬಹುದಲ್ಲವೇ?

ತತ್ವವಾದಿಗಳು – ವ್ಯಾಪ್ತಿಗೋಸ್ಕರ ಎಲ್ಲೆಡೆ ಇರುವುದನ್ನು ಅಂಗೀಕರಿಸಿದರೆ ಆಯಾ ಪದಾರ್ಥಗಳ ಸಂಬಂಧವನ್ನು ಕೂಡ ಒಪ್ಪಿದಂತೆ ಆಗುತ್ತದೆ. ಆದ್ದರಿಂದ 'ಅಸಂಗ'ಶಬ್ದಕ್ಕೆ ಸಂಬಂಧವಿರಹ ಎಂಬರ್ಥವನ್ನು ವಿವಕ್ಷಿಸಬಾರದು.

**ಶ್ರೀನಿವಾಸತೀರ್ಥೀಯ –**

**तत्तत्फललेपाभाव एव परमात्मनोऽसङ्गत्वमित्यत्र ज्ञापकमाह – यथाकाशेति ।। तथाविधेति । लेपाभाववरूपासङ्गत्वोपेतवायुरूप-दृष्टान्तेत्यर्थः ।**

**'ತತ್ತತ್‌ಫಲಲೇಪಾಭಾವ ಏವ ಪರಮಾತ್ಮನಃ ಅಸಂಗತ್ವಮ್' ಇತ್ಯತ್ರ ಜ್ಞಾಪಕಮಾಹ – ತಥಾವಿಧೇತಿ ॥ ಲೇಪಾಭಾವರೂಪಾಸಂಗತ್ವೋಪೇತ-ವಾಯುರೂಪದೃಷ್ಟಾಂತೇತ್ಯರ್ಥಃ।**

ಅಸಂಗ ಎಂಬ ಪದಕ್ಕೆ ಎಲ್ಲಾ ಪದಾರ್ಥಗಳ ಸಂಬಂಧದ ಇಲ್ಲದಿರುವಿಕೆ ಎಂಬರ್ಥ-ವನ್ನು ವಿವಕ್ಷಿಸಬಾರದು. ಸಂಬಂಧವಾದರೂ ಕೂಡ ಸಂಬಂಧದಿಂದ ದೊರೆಯುವ ಫಲದ ಲೇಪವಿಲ್ಲ ಎಂದೇ ಅರ್ಥವನ್ನು ಹೇಳಬೇಕು. ಈ ವಿಷಯದಲ್ಲಿ ಜ್ಞಾಪಕ-ಪ್ರಮಾಣವನ್ನು ''ಯಥಾಕಾಶ'' ಇತ್ಯಾದಿಯಾಗಿ ಉಲ್ಲೇಖಿಸುತ್ತಿದ್ದಾರೆ.

ಸಂಬಂಧವಾದರೂ ಕೂಡ ಸಂಬಂಧದಿಂದ ದೊರೆಯುವ ಫಲದ ಲೇಪವಿಲ್ಲ ಎಂಬುದು ವಾಯುವಿನ ದೃಷ್ಟಾಂತದಿಂದ ಸಿದ್ಧವಾಗಿದೆ ಎಂದಭಿಪ್ರಾಯ.

## ಅಸಂಗಪದದ ಅರ್ಥವನ್ನು ಕೃಷ್ಣನೇ ಹೇಳಿದ್ದಾನೆ

ಶ್ರೀನಿವಾಸತೀರ್ಥೀಯ –

यथाकाशस्थितो नित्यं वायुः सर्वत्रगो महान् ।
तथा सर्वाणि भूतानि मत्स्थानीत्युपधारय ।।

इति गीतावाक्ये परमात्मनः स्वस्यासङ्गत्वे वायुर्दृष्टान्ततया भगवता कृष्णेनोपादीयते ।

'ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ಇತಿ ।

ಇತಿ ಗೀತಾವಾಕ್ಯೇ ಪರಮಾತ್ಮನಃ ಸ್ವಸ್ಯಾಸಂಗತ್ವೇ ವಾಯುರ್ದೃಷ್ಟಾಂತತಯಾ ಭಗವತಾ ಕೃಷ್ಣೇನೋಪಾದೀಯತೇ ।

ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥

ಆಕಾಶದಲ್ಲೆಲ್ಲೆಡೆ ವ್ಯಾಪ್ತವಾಗಿರುವ ವಾಯುವು ಹೇಗೆ ಎಲ್ಲಾ ಪದಾರ್ಥಗಳ ಸಂಪರ್ಕವನ್ನು ಹೊಂದಿದ್ದರೂ ಅಸಂಗವಾಗಿದೆಯೋ ಅದರಂತೆ ನಾನೂ ಕೂಡ ಎಲ್ಲೆಡೆ ವ್ಯಾಪ್ತನಾಗಿದ್ದರೂ ಕೂಡ ಯಾವುದರ ಸಂಪರ್ಕವನ್ನು ಹೊಂದಿಲ್ಲ. ಆದ್ದರಿಂದ ಎಲ್ಲಾ ಭೂತಗಳೂ ನನ್ನ ಸ್ಥಾನ ಎನಿಸಿವೆ.

ಹೀಗೆ ಕೃಷ್ಣನು ಗೀತೆಯಲ್ಲಿ ಅಸಂಗ ಪದದ ಅರ್ಥವನ್ನು ಅರ್ಜುನನಿಗೆ ಸ್ಪಷ್ಟವಾಗಿ ತಿಳಿಸಿರುತ್ತಾನೆ.

## ವಾಯುವಿನ ಉದಾಹರಣೆಯ ಅಭಿಪ್ರಾಯ

ಶ್ರೀನಿವಾಸತೀರ್ಥೀಯ –

तत्र वायोरसङ्गत्वं नाम न तत्तत्पदार्थसम्बन्धविरहरूपम् ।

'आकाशस्थितः सर्वत्रगः' इत्युक्तिविरोधात् । किन्तु तत्तत्पदार्थ-सम्बन्धकृतलेपाभावरूपमेव । अतस्तद्दृष्टान्तेन भगवतोऽप्यसङ्गत्वमुक्त-रूपमेवेत्याशयः ।

**ತತ್ರ ವಾಯೋರಸಂಗತ್ವಂ ನಾಮ ನ ತತ್ತತ್ಪದಾರ್ಥಸಂಬಂಧವಿರಹರೂಪಮ್ 'ಆಕಾಶಸ್ಥಿತಃ ಸರ್ವತ್ರಗಃ' ಇತ್ಯುಕ್ತಿವಿರೋಧಾತ್ । ಕಿಂತು ತತ್ತತ್ಪದಾರ್ಥ-ಸಂಬಂಧಕೃತಲೇಪಾಭಾವರೂಪಮೇವ । ಅತಸ್ತದ್ದೃಷ್ಟಾಂತೇನ ಭಗವತೋ-ಽಪ್ಯಸಂಗತ್ವಮುಕ್ತರೂಪಮೇವೇತ್ಯಾಶಯಃ।**

ಅಲ್ಲಿ ವಾಯುವಿನ ಅಸಂಗತ್ವ ಎಂದರೆ ಆಯಾ ಪದಾರ್ಥಗಳ ಸಂಬಂಧ ಇಲ್ಲದಿ-ರುವಿಕೆ ಎಂದಲ್ಲ. ಹಾಗಾಗಿದ್ದಲ್ಲಿ ಸರ್ವತ್ರಗಃ ಎಂಬುದರಿಂದ ಎಲ್ಲಾ ಪದಗಳ ಸಂಬಂಧ-ವಿದೆ ಎಂದು ಹೇಳಿದ್ದಕ್ಕೆ ವಿರೋಧ ಬರುತ್ತಿತ್ತು. ಆದ್ದರಿಂದ ವಾಯುವಿನಲ್ಲಿರುವ ಅಸಂಗತ್ವ ಎಂದರೆ ಆಯಾ ಪದಾರ್ಥಗಳ ಸಂಬಂಧದಿಂದ ಉಂಟಾಗುವ ಫಲದ ಲೇಪವಿಲ್ಲ ಎಂಬುದಾಗಿಯೇ ಹೇಳಬೇಕು. ಆದ್ದರಿಂದ ಈ ವಾಯುವಿನ ದೃಷ್ಟಾಂತವನ್ನು ನೀಡಿದ್ದರಿಂದ ಭಗವಂತನ ಅಸಂಗತ್ವವೂ ಕೂಡ ಆಯಾ ಪದಾರ್ಥಗಳ ಸಂಬಂಧದಿಂದ ಉಂಟಾಗುವ ಫಲಲೇಪಾಭಾವರೂಪವಾಗಿದೆ ಎಂದೇ ನಿರ್ಣಯವಾಯಿತು - ಇಷ್ಟು ಟೀಕೆಯ ಅಭಿಪ್ರಾಯ.

## ಟೀಕೆಯ ವ್ಯಾಖ್ಯಾನ ಸ್ವಕಪೋಲಕಲ್ಪಿತವಲ್ಲ

ಶ್ರೀನಿವಾಸತೀರ್ಥೀಯ –

प्रमाणजन्यज्ञानेन भ्रान्त्या च सर्वज्ञत्वं विना स्वरूपज्ञानेनैव सर्वज्ञत्वं यदङ्गीकृतं तन्मूलोक्तमित्याह – **तदिदमुक्तमिति** । तदुप-पादयति – **अत्रेति** ।।

**ಪ್ರಮಾಣಜನ್ಯಜ್ಞಾನೇನ ಭ್ರಾಂತ್ಯಾ ಚ ಸರ್ವಜ್ಞತ್ವಂ ವಿನಾ ಸ್ವರೂಪಜ್ಞಾನೇನೈ**

**ಸರ್ವಜ್ಞತ್ವಂ ಯದಂಗೀಕೃತಂ ತನ್ಮೂಲೋಕ್ತಮಿತ್ಯಾಹ – ತದಿದಮುಕ್ತಮಿತಿ ॥ ತದುಪಪಾದಯತಿ – ಅತ್ರೇತಿ ॥**

ಟೀಕೆಯಲ್ಲಿ ಪ್ರಮಾಣಜನ್ಯವಾದ ಜ್ಞಾನದಿಂದ ಹಾಗೂ ಭ್ರಾಂತಿಯಿಂದ ಸರ್ವಜ್ಞತ್ವವನ್ನು ವಿವಕ್ಷಿಸದೇ ಸ್ವರೂಪಜ್ಞಾನದಿಂದಲೇ ಸರ್ವಜ್ಞತ್ವವನ್ನು ಸಾಧನೆ ಮಾಡಿದ್ದಾರೆ. ಇದಕ್ಕೆ ಮೂಲಪ್ರಮಾಣವನ್ನು ಶ್ರೀಮದಾಚಾರ್ಯರ ವಾಕ್ಯದ ಮೂಲಕ ಉಲ್ಲೇಖಿಸುತ್ತಿದ್ದಾರೆ. ತದಿದಮುಕ್ತಮ್ ಇತ್ಯಾದಿಯಾಗಿ. ಇದನ್ನೇ ಅತ್ರ ಇತ್ಯಾದಿ ವಾಕ್ಯದಿಂದ ವಿವರಿಸಿದ್ದಾರೆ.

## ಸಂವೇತ್ತಾ ಎಂಬ ಪದಪ್ರಯೋಗದ ಬಗ್ಗೆ

**ಶ್ರೀನಿವಾಸತೀರ್ಥೀಯ –**

**वारयतीति ।** समित्युपसर्गेण वेदनस्य प्रमाणरूपताया उक्तत्वादिति भावः ।। **ताच्छीलिकेति ।** 'आक्वेस्तच्छीलतद्धर्मतत्साधुकारिषु' इत्यधिकृत्य तृन्निति सूत्रेण विहितो यस्तृन्प्रत्ययस्तेनेत्यर्थः । तथा च तृन्प्रत्ययान्तेन संवेत्तृशब्देनेति यावत् । प्रमाणजन्यतां वारयतीति वर्तते ।।

**ವಾರಯತೀತಿ ॥ ಸಮಿತ್ಯುಪಸರ್ಗೇಣ ವೇದನಸ್ಯ ಪ್ರಮಾಣರೂಪತಾಯಾ ಉಕ್ತತ್ವಾದಿತಿ ಭಾವಃ । ತಾಚ್ಛೀಲಿಕೇತಿ ॥ 'ಆಕ್ವೇಸ್ತಚ್ಛೀಲತದ್ಧರ್ಮತತ್ಸಾಧುಕಾರಿಷು' ಇತ್ಯಧಿಕೃತ್ಯ ತೃನ್ನಿತಿ ಸೂತ್ರೇಣ ವಿಹಿತೋ ಯಃ ತೃನ್‌ಪ್ರತ್ಯಯಃ ತೇನೇತ್ಯರ್ಥಃ । ತಥಾ ಚ ತೃನ್‌ಪ್ರತ್ಯಯಾಂತೇನ ಸಂವೇತ್ತೃಶಬ್ದೇನೇತಿ ಯಾವತ್ । ಪ್ರಮಾಣಜನ್ಯತಾಂ ವಾರಯತೀತಿ ವರ್ತತೇ ॥**

ವಾರಯತಿ ಎಂಬ ಟೀಕೆಯ ಅಭಿಪ್ರಾಯ ಹೀಗಿದೆ – ಆಚಾರ್ಯರ ವಾಕ್ಯದಲ್ಲಿರುವ ಅಖಿಲಸಂವೇತ್ತುಃ ಎಂಬ ಪದದ ನಿಷ್ಪತ್ತಿಯನ್ನು ಇಲ್ಲಿ ತಿಳಿಸುತ್ತಿದ್ದಾರೆ. ಸಮ್ ಎಂಬ ಉಪಸರ್ಗಪೂರಕವಾದ ವಿದ್ ಧಾತುವಿಗೆ ತೃನ್‌ಪ್ರತ್ಯಯವು ಬಂದರೆ ಸಂವೇತ್ತಾ

ಎಂಬ ರೂಪವು ನಿಷ್ಪನ್ನವಾಗುತ್ತದೆ. ಇಲ್ಲಿ ಸಮ್ ಎಂಬ ಉಪಸರ್ಗದಿಂದ ಪರಮಾತ್ಮನ ಸಾರ್ವಜ್ಞ್ಯವು ಭ್ರಾಂತಿಮೂಲಕವಲ್ಲವೆಂದು ನಿರಾಕರಿಸಿದ್ದಾರೆ. ಸಂವೇತ್ತಾ ಎಂಬ ಶಬ್ದವು ತೃನ್ಪ್ರತ್ಯಯಾಂತವಾಗಿರುವುದರಿಂದ ಇದಕ್ಕೆ ತಾಚ್ಛೀಲ ಎಂಬ ಅರ್ಥವು ಇರುತ್ತದೆ. ತಾಚ್ಛೀಲಿಕವಾದ ತೃನ್ಪ್ರತ್ಯಯಾಂತವಾದ ಸಂವೇತೃಶಬ್ದದ ಪ್ರಯೋಗದಿಂದ ಪರಮಾತ್ಮನ ಸಾರ್ವಜ್ಞ್ಯವು ಅವನ ಸ್ವಭಾವವಾಗಿದೆ ಹೊರತು ಪ್ರಮಾಣಜನ್ಯವಲ್ಲ ಎಂಬುದಾಗಿಯೂ ತಿಳಿಸುತ್ತಿದೆ.

ಹೀಗೆ ಸಮ್ ಎಂಬ ಉಪಸರ್ಗ ಹಾಗೂ ತಾಚ್ಛೀಲಾರ್ಥದಲ್ಲಿರುವ ತೃನ್ಪ್ರತ್ಯಯ ಇವುಗಳಿಂದ ಪ್ರಮಾಣಜನ್ಯಸರ್ವಜ್ಞತ್ವವನ್ನು ಹಾಗೂ ಭ್ರಾಂತಿರೂಪಸರ್ವಜ್ಞತ್ವವನ್ನು ನಿರಾಕರಣೆ ಮಾಡಿದ್ದಾರೆ. ಪರಿಶೇಷದಿಂದ ಸ್ವರೂಪಪ್ರಜ್ಞೆಯಿಂದಲೇ ಸರ್ವಜ್ಞತ್ವನ್ನು ಹೇಳುವುದು ಶ್ರೀಮದಾಚಾರ್ಯರಿಗೆ ಸಮ್ಮತವಾಗಿದೆ ಎಂದು ತಿಳಿಸಿದಂತಾಯಿತು.

**ವಿವರಣೆ – ಸಂವೇತ್ತಾ ಎಂಬಲ್ಲಿರುವ ಸಮ್ ಎಂಬ ಉಪಸರ್ಗದಿಂದ ಪರಮಾತ್ಮನು ಕೇವಲ ಜ್ಞಾನವುಳ್ಳವನಲ್ಲ; ಸಂವೇತ್ತಾ = ಎಲ್ಲವನ್ನೂ ಚೆನ್ನಾಗಿ ಬಲ್ಲವನು ಎಂಬರ್ಥವು ತಿಳಿಯುತ್ತದೆ. ಇದರಿಂದ ಪರಮಾತ್ಮನ ಸರ್ವವಿಷಯಕಜ್ಞಾನವು ಭ್ರಾಂತಿರೂಪವಾದದ್ದಲ್ಲವೆಂದು ಹೇಳಿದಂತಾಯಿತು.**

**ಹೀಗೆ ಶ್ರೀಮದಾಚಾರ್ಯರು ಸಮ್ ಎಂಬ ಉಪಸರ್ಗದಿಂದ ಭ್ರಾಂತ್ಯಾತ್ಮಕವಾದ ಸಾರ್ವಜ್ಞ್ಯವನ್ನು ನಿರಾಕರಿಸಿರುವರು. ಅದೇ ಸಂವೇತ್ತಾ ಎಂಬ ಪದದಲ್ಲಿ ಕೊನೆಗೆ ತೃನ್ ಎಂಬ ಪ್ರತ್ಯಯವಿದೆ. 'ಆಕ್ವೇಸ್ತಚ್ಛೀಲತದ್ಧರ್ಮತತ್ಸಾಧುಕಾರಿಷು' ಇತ್ಯಾದಿ ಸೂತ್ರವು ಹೇಳುವಂತೆ ತೃನ್ಪ್ರತ್ಯಯವು ತಾಚ್ಛೀಲಕಾರ್ಥದಲ್ಲಿ ಪ್ರಯುಕ್ತವಾ-ಗುತ್ತದೆ. ಭಗವಂತನಿಗಿರುವ ಸಾರ್ವಜ್ಞ್ಯವು ಅವನ ಸ್ವಭಾವವೇ ಆಗಿದೆ ಎಂಬುದನ್ನು ಈ ಪ್ರತ್ಯಯವು ತಿಳಿಸಿದಂತಾಯಿತು.**

**ಆದ್ದರಿಂದ "ಭಗವಂತನ ಸಾರ್ವಜ್ಞ್ಯತ್ವವು ಅವನ ಸ್ವಭಾವವೇ ಹೊರತು ಪ್ರಮಾಣಜನ್ಯವಲ್ಲ" ಎಂಬ ಪ್ರಮೇಯವನ್ನು ಸಂವೇತ್ತುಃ ಎಂಬ ಪದಪ್ರಯೋಗ-ದಿಂದಲೇ ತಿಳಿಸಿರುತ್ತಾರೆ.**

